ಜೀವನ ಪ್ರೀತಿ ಮಾಲಿಕೆ - ೦೮




ಡಾ. ಎಚ್. ಎಸ್. ಸತ್ಯನಾರಾಯಣ ಅವರ
**ಮರ ಬರೆದ ರಂಗೋಲಿ** ಹಾಯ್ಕುಗಳು ಕೃತಿ ಕುರಿತು

# ರಸ ಚಿಂತನೆ



– ಡಾ. ರವಿಶಂಕರ್ ಎ.ಕೆ



ಜೀವನ ಪ್ರೀತಿ ಮಾಲಿಕೆ – ೦೮

ಡಾ. ಎಚ್. ಎಸ್. ಸತ್ಯನಾರಾಯಣ ಅವರ

**ಮರ ಬರೆದ ರಂಗೋಲಿ ಹಾಯ್ಕುಗಳು ಕೃತಿ ಕುರಿತು**

# ರಸ ಚಿಂತನೆ

– ಡಾ. ರವಿಶಂಕರ್ ಎ.ಕೆ



**ರಸ ಚಿಂತನೆ**

(ಡಾ. ಎಚ್. ಎಸ್. ಸತ್ಯನಾರಾಯಣ ಅವರ ಮರ ಬರೆದ ರಂಗೋಲಿ ಹಾಯ್ಕುಗಳು ಕೃತಿ ಕುರಿತು)

Rasa Chinthane

(Dr. H.S Satyanarayana Avara Mara bareda Rangoli Kruthi kurithu)

**ರಸ ಚಿಂತನೆ**

**ಡಾ. ರವಿಶಂಕರ್ ಎ. ಕೆ**
ಕನ್ನಡ ಸಹಾಯಕ ಪ್ರಾಧ್ಯಾಪಕರು
ಕ್ರಿಸ್ತು ಜಯಂತಿ ಕಾಲೇಜು, ಸ್ವಾಯತ್ತ
ಕೆ. ನಾರಾಯಣಪುರ, ಬೆಂಗಳೂರು – ೫೬೦೦೭೭
೯೬೬೩೪೩೩೪೦೩

ಪ್ರಕಾಶಕರು : **ಜೀವನ ಪ್ರೀತಿ**
ಅಳಿಲುಘಟ್ಟ, ಗುಬ್ಬಿ ತಾಲ್ಲೂಕು,
ತುಮಕೂರು ಜಿಲ್ಲೆ, ಕರ್ನಾಟಕ ೫೭೨೨೨೨

| | |
|---|---|
| **ಐ.ಎಸ್.ಬಿ.ಎನ್.** | : ೯೭೮-೮೧-೯೮೩೮೪೫-೯-೧ |
| ಪ್ರಥಮ ಮುದ್ರಣ | : ೨೦೨೫ |
| ಕಾಗದದ ಬಳಕೆ | : ಡಿಜಿಟಲ್ ಸ್ವರೂಪ |
| ಪುಟಗಳು | : iv + ೪೪ |
| ಹಕ್ಕುಗಳು | : ಲೇಖಕರದ್ದು |
| ಬೆಲೆ | : ಉಚಿತ |
| ಮುಖಪುಟ ವಿನ್ಯಾಸ | : ಅಂಕುರ |
| ಅಕ್ಷರ ಜೋಡಣೆ | : ಶ್ರೀಮತಿ ಕಾವ್ಯ ಕೆ. |
| ಮುದ್ರಣ | : ಡಿಜಿಟಲ್ ಸ್ವರೂಪ |

## ಮೂಲ ಕೃತಿಕಾರರ ನುಡಿಗಳು :

ಕವಿತೆಯ ಸಾಲುಗಳು ಬರೆದ ಕವಿಗಿಂತ, ಸಹೃದಯತೆಯಿಂದ ಸ್ಪಂದಿಸುವ ಓದುಗನಿಗೆ ಸಂವೇದ್ಯವಾಗುವ ಪರಿ ನಿಜಕ್ಕೂ ಅಚ್ಚರಿಯನ್ನು ತರುತ್ತದೆ. ಇದಕ್ಕೆ ಡಾ. ರವಿಶಂಕರ್ ಅವರ ಈ ರಸಚಿಂತನೆಯು ಉತ್ತಮ ಉದಾಹರಣೆಯಾಗಿದೆ. ನಾನು ತುಂಬ ಸಂಕೋಚದಿಂದಲೇ ಹೊರತಂದಿದ್ದ 'ಮರ ಬರೆದ ರಂಗೋಲಿ' ಎಂಬ ಪುಟ್ಟ ಹಾಯ್ಕುಗಳ ಸಂಕಲನಕ್ಕೆ ರವಿಶಂಕರ್ ಅವರು ನೀಡಿರುವ ವ್ಯಾಪಕಾರ್ಥದ ಹೊಳಹುಗಳು ನನಗೆ ಸಂತಸವನ್ನುಂಟು ಮಾಡಿವೆ. ರವಿಯವರ ಓದು ಮತ್ತು ಗ್ರಹಿಕೆಗಳು ಈ ರಸ ಚಿಂತನೆಯುದ್ದಕ್ಕೂ ಸ್ಪಷ್ಟ ಮತ್ತು ನಿಖರವಾಗಿ ಕಾಣುತ್ತವೆ. ಅವರ ಹೃದಯವಂತಿಕೆಯಿಂದ ಮೂಡಿದ ಈ ರಸ ಚಿಂತನೆಯು ಓದುಗರಿಗೆ ಕೈದೀವಿಗೆಯಾಗಬಲ್ಲದು. ಅತ್ಯಂತ ಪ್ರೀತಿಯಿಂದ ರವಿಯವರನ್ನು ಅಭಿನಂದಿಸುತ್ತೇನೆ.

**–ಡಾ.ಎಚ್.ಎಸ್. ಸತ್ಯನಾರಾಯಣ**<br>
ಕನ್ನಡ ಮೇಷ್ಟ್ರು, ಹಿರಿಯ ಸಾಹಿತಿ<br>
ಮರ ಬರೆದ ರಂಗೋಲಿ ಕೃತಿಯ ಕರ್ತೃ

## ಮೂಲ ಪ್ರಕಾಶಕರ ನುಡಿಗಳು :

'ಮರ ಬರೆದ ರಂಗೋಲಿ' – ಡಾ. ಎಚ್.ಎಸ್. ಸತ್ಯನಾರಾಯಣ ಅವರು ಬರೆದಿರುವ ಹಾಯ್ಕುಗಳ ಕಟ್ಟು. ಕೇವಲ ಹದಿನೇಳು ಅಕ್ಷರಗಳಲ್ಲಿ ಸೃಷ್ಟಿಯಾಗಿರುವ ಕಾವ್ಯ ಝಲಕ್. ಮೇಷ್ಟ್ರು ಈ ಕುರಿತಾಗಿ ಮಾತನಾಡುವಾಗ ಈ ಪ್ರಕಾರತ ಸೂಕ್ಷ್ಮತೆಯನ್ನು ವಿವರಿಸಿದ್ದರು. ನಾವು ಹಾಯ್ಕುಗಳನ್ನು ಕೇಳಿ ತಲೆದೂಗಿದ್ದೆವು. ಒಳಗೆ ಅಡಗಿರುವ ಕಾವ್ಯಾತ್ಮಕ ವಿಸ್ತಾರವನ್ನು ಕಂಡು ಬೆರಗಾಗಿದ್ದೆವು. ನಮ್ಮ ಅಲಂಪು ಪ್ರಕಾಶನದ ಹೆಸರಿನಲ್ಲಿ ಅವರ ಹಾಯ್ಕುಗಳು ಲೋಕ ಕಂಡಿದ್ದೂ ಆಯಿತು. ಎಷ್ಟೋ ಓದುಗರು ಹಾಯ್ಕುಗಳನ್ನು ಮೆಚ್ಚಿಕೊಂಡರು. ತಮ್ಮವೆಂಬಂತೆ ಅಪ್ಪಿಕೊಂಡರು. ಡಾ. ರವಿಶಂಕರ್ ಎ.ಕೆ. ಅವರು ಮತ್ತೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ 'ರಸ ಚಿಂತನೆ' ಹೆಸರಿನಲ್ಲಿ ತಮ್ಮ ಗ್ರಹಿಕೆಯನ್ನು ದಾಖಲಿಸಿದ್ದಾರೆ. ಒಂದೊಂದು ಹಾಯ್ಕಿಗು ಅವರು ತಮ್ಮ ಒಳನೋಟಗಳನ್ನು ಬಿತ್ತರಿಸಿರುವ ರೀತಿ ಮೆಚ್ಚುಕೊಳ್ಳುವಂತದ್ದು. ಕವಿಯೊಬ್ಬ ತನ್ನ ನೆಲೆಯಿಂದ ಚಿಂತಿಸಿ ಸೃಜಿಸಿದ್ದನ್ನು ಓದುಗ ಹೇಗೆಲ್ಲ ತಮ್ಮದಾಗಿಸಿಕೊಳ್ಳಬಹುದೆಂಬುದಕ್ಕೆ ಇದೊಂದು ಉದಾಹರಣೆ. ರವಿಶಂಕರ್ ಅವರ ಈ ಪ್ರಯತ್ನಕ್ಕೆ ಶುಭವಾಗಲಿ.. ಓದು ಅಮರವಾಗಲಿ..

**ಡಾ. ಸರ್ವೇಶ್ ಬಂಟಹಳ್ಳಿ**<br>
ಅಲಂಪು ಪ್ರಕಾಶನ, ಮಾಲೂರು

# ಓದಿನ ಒಕ್ಕಣೆ

ಹಾಯ್ಕುಗಳು ಕನ್ನಡದ ಕಿರುಗವಿತೆಗಳು. ಈ ಪ್ರಕಾರ ಹೊರ ಜಗತ್ತಿನದಾದರೂ ಓದುವ ಸಂವೇದನೆ ನಮ್ಮದು. ಸಾಹಿತ್ಯವು ಇಂತಹ ಹಲವು ಪ್ರಕಾರಗಳನ್ನು ಸ್ವೀಕರಿಸಿ, ಮನುಷ್ಯನನ್ನು ಸದಾ ಎಚ್ಚರಿಸುತ್ತದೆ. ಕನ್ನಡದಲ್ಲಿ ಕಾವ್ಯ ಪ್ರಕಾರದಿಂದ ಕವಿತೆ ಪ್ರಕಾರಕ್ಕೆ ಬಂದುದೇ ವಿಭಿನ್ನ ಚರಿತ್ರೆಯಾದರೂ, ಹಾಯ್ಕುಗಳಂತ ವಿಭಿನ್ನ ಪ್ರಕಾರಗಳನ್ನು ಮುಕ್ತವಾಗಿ ಸ್ವೀಕರಿಸಿ ಸಾಕಷ್ಟು ಕೃತಿಗಳನ್ನು ರಚಿಸುತ್ತಾ, ಸಂಶೋಧನೆ ನಡೆಸುತ್ತಿರುವುದು ನಮ್ಮ ಓದುಗರ ವಿಶಾಲ ಗುಣವಾಗಿದೆ.

ಡಾ. ಎಚ್.ಎಸ್ ಸತ್ಯನಾರಾಯಣ ಅವರು ಸುದೀರ್ಘ ಓದುವಿನೊಂದಿಗೆ ಈ ದಶಕದಲ್ಲಿ ಬರಹಕ್ಕೆ ಆಗಮಿಸಿದ ಕನ್ನಡ ಸಾಹಿತ್ಯದ ಅರ್ಥಪೂರ್ಣ ಬರಹಗಾರರು. ಅವರ ವಿವಿಧ ಪ್ರಕಾರಗಳ ಪ್ರಯೋಗದಲ್ಲಿ ಮೂಡಿಬಂದ ಹಾಯ್ಕು ಕೃತಿ ಇದು. ಕೃತಿ ಕುರಿತು ಪ್ರತಿ ಹಾಯ್ಕುವಿನಲ್ಲಿಯೂ ನನ್ನ ಸಂವೇದನೆಗಳನ್ನು ಚರ್ಚಿಸಿದ್ದೇನೆ. ಇದು ಓದುವ ಒಂದು ಹೊಸಮಾರ್ಗ. ನೀವು ನಿಮ್ಮ ಪರಿಸರ ಹಾಗೂ ಆಸಕ್ತಿಗಳಂತೆ ವಿಸ್ತರಿಸಿಕೊಂಡು ಓದಬಹುದು. ಆ ಓದುವಿನ ರಸ ಚಿಂತನೆಯು ಇನ್ನೊಬ್ಬರಿಗೂ ತಲುಪಿದರೆ, ಸಾಹಿತ್ಯದ ಕಾರ್ಯ ಯಶಸ್ಸು ಪಡೆಯುತ್ತದೆ.

ಸಹೃದಯ ಓದುವು ಒಮ್ಮೊಮ್ಮೆ ಅನಿಸಿಕೆ, ವಿಮರ್ಶೆ, ಚಿಂತನೆ ಯಾವ ಸ್ವರೂಪದಲ್ಲಾದರೂ ಪ್ರಕಟಗೊಳ್ಳಬಹುದು. ಅಂತಹ ನನ್ನ ಪ್ರಯತ್ನದಲ್ಲಿ ಬರಹಗಳು ಕೃತಿರೂಪ ಪಡೆದಿವೆ. ಈಗಾಗಲೇ ಕೆಲವನ್ನು ಓದಿದ್ದೀರಿ, ಪೂರ್ಣ ಓದುವಿಗಾಗಿ ಈ ಪುಸ್ತಕವನ್ನು ಉಚಿತವಾಗಿ ನಿಮ್ಮ ಮುಂದಿಡುತ್ತಿದ್ದೇನೆ. ನೀವು ಓದಿ, ಆನಂದಿಸಿದರೆ ಈ ಕಾರ್ಯವು ಅರ್ಥಪೂರ್ಣವಾಗುತ್ತದೆ. ಇದು ಜೀವನ ಪ್ರೀತಿ ಪ್ರಕಾಶನದ ಮೂಲಕ ಜೀವನ ಪ್ರೀತಿ ಮಾಲಿಕೆಯ ಎಂಟನೆಯ ಕೃತಿಯಾಗಿ ಪ್ರಕಟಗೊಳ್ಳುತ್ತಿದೆ. ಈ ಮೂಲಕ ಮರ ಬರೆದ ರಂಗೋಲಿ ಮರು ಓದುವಿಗೆ ಲಭಿಸುತ್ತಿದೆ. ಪ್ರಕಟಿಸಲು ಅನುಮತಿ ನೀಡಿದ ಡಾ. ಎಚ್.ಎಸ್ ಸತ್ಯನಾರಾಯಣ ಮೇಷ್ಟ್ರಿಗೂ, ಇದನ್ನು ಮೊದಲು ಪ್ರಕಟಿಸಿದ ಅಲಂಪು ಪ್ರಕಾಶನದ ಪರವಾಗಿ ಬರಹವನ್ನು ನೀಡುವ ಮೂಲಕ ಕೃತಿಗೆ ಪ್ರೀತಿ ಹೆಚ್ಚಿಸಿದ ಆತ್ಮೀಯ ಮೇಷ್ಟ್ರು ಡಾ. ಸರ್ವೇಶ್ ಅವರಿಗೂ ಮನಃಪೂರ್ವಕ ಧನ್ಯವಾದಗಳು. ಕೃತಿ ನಿಮಗೆ ಯಾವಾಗಲೂ ಉಚಿತವಾಗಿ ಲಭ್ಯವಿರುತ್ತದೆ. ಚಿಂತನೆ ನಮ್ಮದು, ಓದಿನ ಆನಂದ ನಿಮ್ಮದು.

**– ಡಾ. ರವಿಶಂಕರ್ ಎ.ಕೆ.**

೨೦.೦೩.೨೦೨೫

**ರಸ ಚಿಂತನೆ –** ಡಾ. ರವಿಶಂಕರ್ ಎ.ಕೆ.

ಡಾ. ಎಚ್. ಎಸ್ ಸತ್ಯನಾರಾಯಣ ಅವರ ಮರ ಬರೆದ ರಂಗೋಲಿ ಕೃತಿಯ ಅಧ್ಯಯನ

**ನೋಟ ನಕ್ಷತ್ರ**
**ತುಟಿ ಬಿರಿದ ಹೂ**
**ಚಂಚಲತೆ ಸ್ಥಾಯಿ**

ಡಾ. ಎಚ್. ಎಸ್ ಸತ್ಯನಾರಾಯಣ ಅವರ ಮರ ಬರೆದ ರಂಗೋಲಿ ಕೃತಿಯ ಮೊದಲ ಹಾಯ್ಕು ಇದು. ಎರಡು ವಿಮುಖಗಳ ಸಾಂಗತ್ಯವಿಲ್ಲಿದೆ. ವಿಶಾಲವಾದ ನೋಟವು ಲೋಕವನ್ನು ಸ್ಮೃತಿಗೊಳಿಸುವಂತೆ, ತುಟಿ ಬಿರಿದ ಹೂವಿನಂತೆ ಆಕರ್ಷಣೆಯಾಗುವ, ಅಪಾರ ಪ್ರೇಮ ಕಾಮವನ್ನು ಉದ್ಭವಿಸುವ ಜಗತ್ತು ಮನಸನ್ನು ಉನ್ಮೇಷಗೊಳಿಸುತ್ತದೆ. ಒಂದು ತೆರೆದ ಮನ. ಮತ್ತೊಂದು ಕುತೂಹಲ ಕೆರಳಿಸುವ ಆಕರ್ಷಣೆ. ಇವು ಚಂಚಲದಷ್ಟೇ, ಸ್ಥಿರವೂ ಹೌದು. ನಮ್ಮ ಮನಸ್ಸನ್ನು ಈ ಲೋಕದಲ್ಲಿ ಕಾಪಿಟ್ಟುಕೊಳ್ಳುವ ಎರಡು ಬಗೆಗಳನ್ನು ೧೭ ಅಕ್ಷರಗಳ ಹಾಯ್ಕು ಸ್ವರೂಪದಲ್ಲಿ ಕಾವ್ಯಮನ ಕಡೆದಿಟ್ಟಿದೆ. ಇಲ್ಲಿ ಹಾಯ್ಕು ಮೂಲರೂಪದಂತೆ ಸಾಲುಗಳ ನಿಯಮ ಹೊಂದದೆ, ಪೂರ್ಣ ನಿಯಮವನ್ನಷ್ಟೇ ಪಾಲಿಸಿದೆ.

**ಭೂಮಿ ತಿರುಗಿತು**
**ತನ್ನ ಪಾಡಿಗೆ ತಾನು**
**ನಿನ್ನದೇನು?**

ಭೂಮಿಯು ಒಂದು ಗ್ರಹ. ಇತರ ಗ್ರಹಗಳಂತೆ ಅದರ ನಿರಂತರ ಚಲನೆ ಇದೆ. ಈ ಭೂಮಿಯಲ್ಲಿ ಹುಟ್ಟಿದ ಮನುಷ್ಯ ಜೀವಿಯು ಉಳಿದೆಲ್ಲಾ ಜೀವಿಗಳಿಗಿಂತ ವಿಭಿನ್ನ. ಅನ್ವೇಷಣೆ ಹಾಗೂ ಸಂಶೋಧನೆಯ ಹೆಸರಿನಲ್ಲಿ ಇಡೀ ಭೂಮಿಯ ಇಂಚಿಂಚೂ ಶೋಧಿಸಿ ನಾಶಮಾಡುತ್ತಿರುವುದನ್ನು ಕಾಣಬಹುದು. ಅಭಿವೃದ್ಧಿ ಎಂಬುದು ಸ್ವಾರ್ಥದ ಹಕ್ಕಾಗಿ, ಹಣದಿಂದ ಎಲ್ಲವೂ ಸಾಧ್ಯವಾಗಿಸುತ್ತಿದ್ದೇವೆ. ಭೂಮಿಯು ತನ್ನ ಪಾಡಿಗೆ ತಾನು ತನ್ನ ಕಾಲಚಕ್ರದೊಂದಿಗೆ ಚಲಿಸುತ್ತಿದೆ. ಅದನ್ನು ನಾಶಮಾಡುತ್ತಾ ಅದರ ವಿಕೋಪಗಳನ್ನು ಅನುಭವಿಸುತ್ತಾ ನಿತ್ಯ ಪ್ರತಿ ಜೀವಿಯೂ ನಾಶದ ಹಂತವನ್ನು ತಲುಪುವ ವಿನಾಶಗೀತೆಯನ್ನು ಕವಿಯು ಸಹಜತೆಯ ವಿರುದ್ಧ 'ನಿನ್ನದೇನು' ಎಂದು ಪ್ರಶ್ನಿಸಿದ್ದಾರೆ.

**ದೂರ ದೂರ ನೀ**
**ಹಾರ ಬೇಡ ಬಂಧು**
**ಬಾ ಒಲುಮೆ ಬೀರು**

ಇರುವ ಭಾಗ್ಯವ ನೆನೆದು ಬಾಳುವ ಸವಿಯನ್ನು ಡಿ.ವಿ.ಜಿ ತಿಳಿಸಿದ್ದಾರೆ. ಶಿಕ್ಷಣ ಕಲಿಯದ ಜಗತ್ತಿನ

ಮನುಷ್ಯರೆಲ್ಲರೂ ಇರುವ ಪ್ರಕೃತಿ, ಸಂಬಂಧಗಳ ಜೊತೆಯಲ್ಲಿ ಹೊಂದಿಕೆಯೊಂದಿಗೆ ಪ್ರೀತಿಯಿಂದ ಬಾಳ್ವೆ ನಡೆಸಿದರು. ಶಿಕ್ಷಣ ಕಲಿತ ನಾವು ದೂರವನ್ನು ಹತ್ತಿರವಾಗಿಸಿಕೊಂಡು ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಹಾರುತ್ತಲೆ ಇದ್ದೇವೆ. ದೂರವೆಂಬುದು ವಿದೇಶವಷ್ಟೇ ಅಲ್ಲ. ಮನಸ್ಸಿನಿಂದಲೂ ದೂರ ಸರಿಯುತ್ತಿದ್ದೇವೆ. ಹೊಸ ಸಂಬಂಧಗಳ ಹುಡುಕಾಟದಲ್ಲಿ ರಾಜಿಯಾಗುವ, ಕ್ಷಮಿಸುವ 'ಒಲುಮೆ'ಯ ಗುಣವನ್ನು ಕಳಚುತ್ತಿದ್ದೇವೆ.

ಒಲವೆ ಜೀವನ ಸಾಕ್ಷಾತ್ಕಾರವೆಂಬಂತೆ ಎಲ್ಲವನ್ನೂ ಗೆಲ್ಲಬಹುದು. ದೂರದ ಬೆಟ್ಟ ನುಣ್ಣಗೆ, ಪೊದೆಯ ಹಕ್ಕಿಗಿಂತ, ಕೈಯಲ್ಲಿರುವ ಹಕ್ಕಿಯೇ ಮಿಗಿಲು ಇಂತಹ ಜೀವನ ಸಂದೇಶವನ್ನು ಕವಿಯು ಹಾಯ್ಕು ಮೂಲಕ ಕಿವಿಮಾತಾಗಿಸಿದ್ದಾರೆ.

**ಭ್ರಮೆಯು**
**ಕವಿತೆ ಬರೆವುದು**
**ಬರೆಯದಿರುವುದು**

**ಕಾವ್ಯದ ಕರುಣೆಯ**
**ಹರಿವು**
**ಹಸಿದವರೆಡೆಗೆ**

೧೩ನೇ ಶತಮಾನದ ಪರ್ಷಿಯನ್ ಮಹಾಕವಿ ಜಲಾಲ್ ಅಲ್-ದಿನ್ ಮುಹಮ್ಮದ್ ರೂಮಿ ಹೇಳುತ್ತಾರೆ.

"Poetry can be dangerous, especially beautiful poetry, because it gives the illusion of having had the experience without actually going through it."

ನಮ್ಮ ಅದೆಷ್ಟೋ ಭ್ರಮೆಗಳು ಕವಿತೆಯನ್ನು ಬರೆಯಬಹುದು. ಬರೆಯದಿರಬಹುದು. ಕಾರಣ, ಕವಿತೆಯೆಂಬುದು ಕಲ್ಪನೆ, ಭ್ರಮೆ ಅಥವಾ ದರ್ಶನರೂಪಿ.

ಕವಿಸಮಯ ಕುರಿತು ರಾಜಶೇಖರನು ಮೊದಲಿಗೆ ನಾಲ್ಕು ಬಗೆಗಳನ್ನು ತಿಳಿಸುತ್ತಾನೆ. ಅಸದಾಖ್ಯಾತಿ, ಸದಕೀರ್ತನ, ನಿಯಮ, ಐಕ್ಯ. ಕವಿತೆಯು ಇಂತಹ ರೂಪಗಳಲ್ಲಿ ಸದಾ ಅವತರಿಸುತ್ತದೆ. ಲೋಕ-ಕಾಲ-ಜೀವಗಳ ಮುಕ್ತ ಜಗತ್ತಿನ ಸ್ವಚ್ಛಂದ ಕ್ರಿಯೆಯಾಗಿದೆ. ಆದ್ದರಿಂದ, ಎಲ್ಲಾ ಭ್ರಮೆಗಳು ಕವಿತೆಯಾಗುವುದಿಲ್ಲ. ಕವಿತೆಯಾಗಲು ಸತ್ಯದ, ದರ್ಶನದ ಶಕ್ತಿ ಇರಬೇಕು ಎನಿಸುತ್ತದೆ.

**ಕವಿ ಮನಕ್ಕೆ**
**ಬರೆಯದ ಕವಿತೆ**
**ಕನವರಿಕೆ**

ಈ ಕೃತಿಗೆ ರೇಖಾಚಿತ್ರಗಳನ್ನು ಬರೆದ ಜಬೀವುಲ್ಲಾ ಎಂ. ಅಸದ್ ಅವರು ಕೃತಿಯ ಮುನ್ನುಡಿಯಲ್ಲಿ 'ಹೀಗೆ... ಬರೆಯದ ಅಥವಾ ಬರೆಯಲಾಗದ ಕವಿತೆ, ಕವಿಯ ಮನಸಿಗೆ ಕನವರಿಕೆಯಾಗಿ ಮಿಗಿಲಿಹೋಗುವ ಸುಖ ಅವ್ಯಕ್ತ, ಅವರ್ಣನೀಯ, ಅನಿರ್ವಚನೀಯ, ಅನರ್ಘ್ಯ! ಅಷ್ಟೇ ಯಾತನಾಮಯವೂ ಹೌದು' ಎಂದಿದ್ದಾರೆ.

ಕವಿ ಒಂದು ರೀತಿಯಲ್ಲಿ ರೋಗಗ್ರಸ್ತ ಸುಖಿ. ಸದಾ ಸಮಾಜದ ಒಂದು ಸಮಸ್ಯೆಯನ್ನು ತನ್ನೊಳಗೆ ತುಂಬಿಕೊಂಡು ಅಚಲ ಅಕ್ಷರ ರೂಪಕೊಡಲು ಕವಿಮನ ಹವಣಿಸುತ್ತದೆ. ಕವಿತೆಯೆಂಬುದು ಕೂಡ ಕಾಲಾತೀತ ಪ್ರಜ್ಞೆ, ಅದನ್ನು ಸೃಷ್ಟಿಸುವುದು ಒಂದು ಹೆರಿಗೆಯ ಬೇನೆಯೇ ಹೌದು. ರುಚಿಯಾದ ಊಟವನ್ನು ತಯಾರಿಸಿದಷ್ಟೇ ಶ್ರಮ ಹಾಗೂ ಆನಂದ. ಆದ್ದರಿಂದ ಕವಿ ಮನಸ್ಸು ಉಳ್ಳವರಿಗೆ ತಾನು ಬರೆಯಬೇಕು ಎಂದು ತನ್ನೊಳಗೆ ಸೃಷ್ಟಿಸಿಕೊಂಡ ಕವಿತೆಯ ರೂಪಕ್ಕೆ ಒಂದು ಸರಿಯಾದ ಸ್ವರೂಪ ಬರುವ ತನಕ ಮನದಲ್ಲೇ ಹಪಾಹಪಿಸುವುದನ್ನು ಕಾಣಬಹುದು.

ಕವಿ ಎಂಬುದು ಲಿಂಗಬೇಧವಿಲ್ಲದ ಪದನಾಮ. ಕವಯತ್ರಿ ಎಂಬ ಪದವಿಲ್ಲ. ಕವಿಮನವುಳ್ಳ ಇಬ್ಬರನ್ನೂ ಕವಿ ಎಂದು ಕರೆಯಬಹುದು ಎನ್ನುತ್ತಾರೆ ಭಾಷಾವಿಜ್ಞಾನಿಗಳು.

**ಒಂದೇ ಕಡಲಲಿದ್ದೆವು**
**ಈಗ ನಾವು**
**ಎರಡು ದಡ**

ಬಾಲ್ಯ ಮತ್ತು ಬದುಕನ್ನು ಕಟ್ಟಿಕೊಡುವ ಈ ಕವಿತೆಯು ವಿಶಾಲವಾದ ಅರ್ಥಗಳನ್ನು ಧ್ವನಿಸುತ್ತದೆ. ಬಾಲ್ಯದಲ್ಲಿ ನಾವೆಲ್ಲಾ ಎಲ್ಲಾ ವಿಚಾರ, ಆಚಾರಗಳಲ್ಲಿ ಒಂದೇ ರೀತಿಯಲ್ಲಿ ಆಲೋಚಿಸುತ್ತೇವೆ. ಆಚರಿಸುತ್ತೇವೆ ಹಾಗೂ ಬದುಕುತ್ತೇವೆ. ಬೆಳೆದಂತೆ ನಮ್ಮ ಆಲೋಚನೆಗಳು ವಿಭಿನ್ನವಾಗುತ್ತವೆ. ವಿರುದ್ಧ ಮುಖಗಳಾಗಿಯೂ ಚಲಿಸಬಹುದು. ಮತ್ತೆಂದೂ ಕೂಡದಿರಬಹುದು. ಮತ್ತೊಂದು ಅರ್ಥದಲ್ಲಿ ಕಡಲಾಗಿದ್ದ ಬದುಕು ಬೆಳೆದಂತೆ ಕಡಲನ್ನು ಕಾಯುವ ದಡವಾಗಿ ಬದುಕುವುದು ಕೂಡ ವಿಭಿನ್ನವೇ ಸರಿ. ದಡವಿಲ್ಲದೆ ಕಡಲು ಸ್ವತಂತ್ರವಾಗಿ

ಚಲಿಸದು. ಒಂದು ಸಂಸ್ಕೃತಿ, ದೇಶ, ಭಾಷೆಗಳನ್ನು ಉಳಿಸಲು ಮುಖಾಮುಖಿಯಾಗಿ ನಿಂತು ಆಸರೆಯ ತೊಟ್ಟಿಲಾಗುವ ಕ್ರಿಯೆಯೂ ಕೂಡ ಅರ್ಥಪೂರ್ಣ.

ಜಾತಿ ಮತ ಧರ್ಮಗಳು, ಅಕ್ಷರ, ಅಜ್ಞಾನಗಳು ನಮ್ಮ ಬದುಕಿನ ನಡುವೆ ಕಂದರವನ್ನು ತಂದು ವಿಭಾಗಿಸುವ ಮನೋವೈಕಲ್ಯಗಳಲ್ಲಿ ಎಚ್ಚರವಿರಬೇಕೆಂದು ಕವಿಯು ಸಂದೇಶ ನೀಡಿದ್ದಾರೆ.

**ಕಾಯುವಿಕೆಯು**
**ತಪವಲ್ಲ ಗೆಳತಿ**
**ಆತ್ಮದ ಸುಖ**

ಹಾಯ್ಕುವಿನ ಪೂರ್ಣ ನಿಯಮದಂತೆ ರಚನೆಯಾದ ಈ ಸಾಲುಗಳು ಮಧುರ ವಿರಹವನ್ನು ಅಭಿವ್ಯಕ್ತಪಡಿಸಿವೆ. ಒಲವು ಉಂಟಾದ ಮೇಲೆ, ಒಲವಿಗಾಗಿ ಹಂಬಲಿಸುವ ಪ್ರತಿ ಹೃದಯದಲ್ಲೂ ಒಂದು ಭರವಸೆ ಸದಾ ಇರುತ್ತದೆ. ಒಲವಿನಲ್ಲಿ ಗೆಲ್ಲುವ ಸುಖವನ್ನು ಕಾಯುವಿಕೆಯು ತಪಸ್ಸಿನಂತಲ್ಲ ಎಂದಿದ್ದಾರೆ. ತಪಸ್ಸು ಯಾವಾಗಲೂ ಫಲದ ಹಂಬಲ, ದೊರೆತ ಮೇಲಷ್ಟೇ ಆನಂದ. ಒಲವಿರುವ ಮನಸ್ಸುಗಳಿಗೆ ಕಾಯುವಿಕೆಯೂ ಕೂಡ ಆತ್ಮದ ಸುಖವಾಗಿರುತ್ತದೆ. ಇಲ್ಲಿ ಕವಿಯು ಒಲವು ಬಾಹ್ಯರೂಪವಲ್ಲ, ಆತ್ಮಸ್ವರೂಪವೆಂದಿದ್ದಾರೆ. ಇಂತಹ ಸುಖದಲ್ಲಿಯೇ ಸಾಧನೆ ಮಾಡುವ ಅದೆಷ್ಟೋ ಪ್ರೇಮಗಳು ಅಂತಿಮವಾಗಿ ಮಧುರ ವ್ಯಾಖ್ಯಾನ ಬರೆದಿವೆ.

**ಮರ್ತ್ಯ ಮೀರಿದ**
**ಮಾತು, ಕನಸು**
**ರೆಕ್ಕೆ ಹರಿದ ಹಕ್ಕಿ**

ಈ ಬದುಕು ಅರ್ಥಪೂರ್ಣವಾಗಿರಬೇಕು. 'ನುಡಿಯೊಳಗಾಗಿ ನಡೆಯದಿದ್ದರೆ' ನಮ್ಮ ನಂಬಿಕೆಗೆ ಮೌಲ್ಯವಿಲ್ಲ. ಇಂದು ಇನ್ನೊಬ್ಬರಿಗೆ ಆದರ್ಶ ಹೇಳುತ್ತಾ, ನಾವು ಸಮಯ ಸಾಧಕರಾಗಿ ಸ್ವಾರ್ಥ ಕನ್ನಡಿಯಲ್ಲಿ ಬದುಕುವ ಕ್ಷಣಗಳನ್ನೆ ಅನುಭವಿಸುತ್ತಿದ್ದೇವೆ. ಎಲ್ಲರಲ್ಲೂ ಈ ಮನುಷ್ಯ ಲೋಕವನ್ನು ಮೀರಿದ ಮಾತುಗಳು, ಕನಸುಗಳನ್ನು ನಿತ್ಯ ಕಾಣುತ್ತಿದ್ದೇವೆ. ಆದರೆ, ಅವುಗಳು ತಮ್ಮ ನಡೆಯಲ್ಲಿ ಇಲ್ಲದಿದ್ದರೂ ತಮ್ಮನ್ನು ಎಲ್ಲರೂ ಮೆಚ್ಚಬೇಕೆಂಬ ಆತುರದ ಹಪಾಹಪಿಯಲ್ಲಿ ಬದುಕುತ್ತಿದ್ದೇವೆ. ಒಂದು ಚಿಕ್ಕ ಮಗು ಕೂಡ, ತಮ್ಮ ತಪ್ಪುಗಳನ್ನು ಕೇಳಿಸಿಕೊಳ್ಳದ ಸ್ಥಿತಿಗೆ ತಲುಪಿದೆ ಎಂದಮೇಲೆ ನಾವು ಕಿವಿ ಇಲ್ಲದ ನುಡಿ ಜಾಣರಾಗಿರುವುದು ಸತ್ಯ. ಈ ಬದುಕನ್ನು ಕವಿ 'ರೆಕ್ಕೆ ಹರಿದ ಹಕ್ಕಿಗೆ' ಹೋಲಿಸಿದ್ದಾರೆ. ಆಧಾರವಿಲ್ಲದ ಬದುಕು ಕ್ಷಣ ಹಿತದ ಸುಖವಷ್ಟೆ.

ನಾಳೆಗೆ ಭವಿಷ್ಯವಿಲ್ಲದೆ ವಿನಾಶಹೊಂದುತ್ತೇವೆ ಎಂಬ ಸಂದೇಶವನ್ನು ನೀಡಿದ್ದಾರೆ.

ಎಲ್ಲರೂ ಪ್ರೀತಿಸುವ ಆದರ್ಶ ವ್ಯಕ್ತಿಗಳ ಬದುಕನ್ನು ಗಮನಿಸಿದರೆ, ಅವರು ಸರಳವಾಗಿ ಬದುಕಿದರು. ಕಡಿಮೆ ನುಡಿದರು, ನುಡಿಯಂತೆ ನಡೆದರು. ಇತಿಹಾಸದಲ್ಲಿ ಅಳಿಸದ ಪುಟವಾದರು. ಕುವೆಂಪು ಹೇಳುವಂತೆ 'ಅನಂತ ತಾನ್ ಅನಂತವಾಗುವುದು' ಇಂತಹ ಅರ್ಥಪೂರ್ಣ ರೆಕ್ಕೆಗಳೊಂದಿಗೆ ಹಾರಿದಾಗ ಮಾತ್ರ ಎನಿಸುತ್ತದೆ.

**ನಿಟ್ಟುಸಿರ ಬೇಗೆ**
**ಅನುದಿನವೂ**
**ಮಾಯೆ ಬಿಡದಲ್ಲ !**

ನಾವು ಅದೆಷ್ಟು ಸಂತೃಪ್ತಗೊಂಡರೂ, ನಮ್ಮ ಆಸೆಗಳಿಗೆ ಮಿತಿಯಿಲ್ಲ. ವಚನಕಾರರು ಈ ಲೌಕಿಕ ಜಗತ್ತಿನ ವಿಷಯಾಸಕ್ತಿಗಳನ್ನು ಮಾಯೆ ಎಂದು ಕರೆದರು. ಇಂತಹ ಮಾಯೆಯು ನಿತ್ಯ ನಮ್ಮನ್ನು ಕಾಡುತ್ತಲೇ ಇರುತ್ತದೆ. ಪ್ರತಿ ಕಾರ್ಯದಲ್ಲೂ ನಿಟ್ಟುಸಿರ ಬೇಗೆಯನ್ನು ಅನುಭವಿಸಿದರೂ ಅದರಿಂದ ಆಚೆ ಬರಲಾರೆವು.

ಪ್ರೇಮದ ಕಾಣಿಕೆ ಚಿತ್ರದಲ್ಲಿ ಫಿರೋಜ್ ದಿನ್ ಬರೆದಿರುವ 'ಆಸೆಯೆಂಬ ಬಿಸಿಲು ಕುದುರೆ ಏಕೆ ಏರುವೇ' ಎಂಬಂತೆ ನಮಗೆ ಈ ಸವಾರಿಯಿಂದ ಕಳಚಿಕೊಳ್ಳಲಾಗುತ್ತಿಲ್ಲ. ಈ ಬದುಕು ಅತೃಪ್ತ ಆತ್ಮವೇ ಹೊರೆತು, ತೃಪ್ತ ಚೈತನ್ಯವಲ್ಲ. ಆದ್ದರಿಂದ ಇದನ್ನು ಗೆಲ್ಲುವ ಪುಟ್ಟ ಪ್ರಯತ್ನಗಳನ್ನಾದರೂ ಮಾಡಬೇಕು ಎನ್ನುತ್ತದೆ ಈ ಕವಿತೆ.

**ಆಗಸದ ಮಳೆಬಿಲ್ಲು**
**ಎದೆಗೆ**
**ಹಾಯುವುದು ಹೇಗೆ?**

ಮಳೆಬಿಲ್ಲನ್ನು ಕಾಮನಬಿಲ್ಲೆಂದು ಸಂಭ್ರಮಿಸುವ ಪ್ರತಿ ಮನಸ್ಸಿನಲ್ಲೂ ಉಲ್ಲಾಸದ ಚಿಲುಮೆ ಚಿಮ್ಮುತ್ತದೆ. ಆಗಸದಲ್ಲಿ ಮೂಡಿದಂತೆ ಮನಸ್ಸಿನಲ್ಲೂ ಬಹುವರ್ಣದ ಆನಂದ ಮೂಡುವುದು ಹೇಗೆಂದು ಪ್ರಶ್ನೆಯಲ್ಲೇ ಕವಿ ಉತ್ತರ ತುಂಬಿದ್ದಾರೆ.

ಸಾಮಾನ್ಯವಾಗಿ ಮಳೆ ನಿಲ್ಲುವ ಸಂದರ್ಭದಲ್ಲಿ ಬೀಳುವ ಕೊನೆಯ ಹನಿಗಳ ಮೇಲೆ ಆಕಾಶದಲ್ಲಿ ಮೂಡಿದ, ಸೂರ್ಯನ ಪ್ರಕಾಶ ಬೆಳಕು ಚೆಲ್ಲಿದಾಗ ಮಳೆಬಿಲ್ಲು ಮೂಡುತ್ತದೆ. ಹೊರಗೆ ಕೆಂಪು, ಒಳಗೆ ನೇರಳೆ ಬಣ್ಣವನ್ನು ಒಳಗೊಂಡ ಏಳು ಬಣ್ಣಗಳ ಸೊಬಗು. ಮನಸ್ಸಿಗೆ ಕ್ಷಣಮಾತ್ರದಲ್ಲಿಯೇ ಉಲ್ಲಾಸ

ತುಂಬುವ ಕ್ರಿಯೆ. ರೈತರು ಕಾಮನಬಿಲ್ಲು ಕಂಡರೆ ಮಳೆ ನಿಂತಿತು ಎನ್ನುವರು.

ಕನ್ನಡದ 'ಸೈನಿಕ' ಎಂಬ ಸಿನೆಮಾದಲ್ಲಿ ಕೆ. ಕಲ್ಯಾಣ್ ಬರೆದ ಸಾಹಿತ್ಯ ಮರೆಯಲಾಗುವುದೇ! 'ಮಳೆಬಿಲ್ಲೆ ಮಳೆಬಿಲ್ಲೆ ಜೊತೆ ನಡೆಯೆ ಮಳೆಬಿಲ್ಲೆ ಗೆಳೆಯಾ ಬರುತಾನೆ ಊರಿಗೆ' ಎಂಬ ಹಾಡು ಎಷ್ಟೊಂದು ಪ್ರಸಿದ್ಧಿ ಅಲ್ಲವೆ. ಆಗಸದಲ್ಲಿ ಮೂಡುವ ಮಳೆಬಿಲ್ಲಿಗೆ ಆಯಸ್ಸು ಕಡಿಮೆಯಾದರೂ ಮನಸ್ಸಿಗೆ ಮುದ ತಂದು ಪ್ರಕೃತಿಯನ್ನು ತನ್ಮಯಗೊಳಿಸುತ್ತದೆ. ಅಂತಹ ಚೈತನ್ಯ ಎಲ್ಲರಲ್ಲೂ ಸೃಷ್ಟಿಗೊಳ್ಳಲಿ ಎಂಬುದೇ ಕವಿತೆಯ ಆಶಯ.

**ನನ್ನೊಳಗೊಂದು ನದಿ**
**ನಿನ್ನೊಳಗೊಂದು**
**ಸಂಗಮಿಸೀತೇ?**

ನದಿಯು ಸ್ವಚ್ಛಂದವಾಗಿ ಹರಿಯುವ ಸಂಕೇತ. ನೀರಿನ ಉಪಮೆಯಲ್ಲಿ ಜ್ಞಾನ, ಬದುಕು, ಕಾಯಕ, ಸಾಧನೆ ಹಲವು ವಿಚಾರಗಳು ನಮ್ಮ ಸಾಹಿತ್ಯದಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಇಂತಹ ಉಪಮೆಯನ್ನು ನಮ್ಮೊಳಗೆ ತಂದುಕೊಳ್ಳುವ ಪರಿಯು ಈ ಕವಿತೆಯಲ್ಲಿದೆ. ನಮ್ಮ ಬದುಕು ನೀರಿನಂತಿರಬೇಕು. ನೀರು ಎಂದಿಗೂ ನಿಲ್ಲಲು ಇಷ್ಟಪಡುವುದಿಲ್ಲ. ನಾವು ಬಲವಂತವಾಗಿ ನಿಲ್ಲಿಸಿದರೆ, ತನ್ನ ಮೂಲಸ್ವಭಾವವನ್ನೇ ಕಳೆದುಕೊಂಡು ಕಶ್ಮಲವಾಗಿ ಸಮಸ್ಯೆ ಸೃಷ್ಟಿಸುತ್ತದೆ. ಏಕೆಂದರೆ ಎಲ್ಲವನ್ನು ತನ್ನೊಳಗೆ ತುಂಬಿಕೊಳ್ಳುವ, ಕರಗಿಸುವ ಸ್ವಭಾವದ ಗುಣವದು. ಮನುಷ್ಯನ ವ್ಯಕ್ತಿತ್ವವೂ ಕೂಡ ನೀರಿನಂತೆ ಸದಾ ಚಲಿಸುವ ಗುಣಹೊಂದಿರಬೇಕು. ಎಲ್ಲರೊಂದಿಗೂ ಬೆರೆತು ಹೊಸ ಹಂಬಲಗಳೊಂದಿಗೆ ಸೇರುತ್ತಾ ಹರಿಯಬೇಕು.

ನನ್ನೊಳಗೆ ಸೃಷ್ಟಿಗೊಳ್ಳುವ ಇಂತಹ ಚಲನಶೀಲತೆಯು, ನಿನ್ನೊಳಗೂ ಮೂಡಿ ಆ ಎರಡೂ ಕೂಡಿ ಹೊಸ ಚೈತನ್ಯವಾಗುವ ಜ್ಞಾನ ಮಧುರತೆಯನ್ನು ಈ ಕವಿತೆಯು ಪ್ರಶ್ನಿಸುತ್ತಿದೆ. ಇದನ್ನು ಇಂದಿನ ವ್ಯವಹಾರ ಪದ್ಧತಿಯಲ್ಲಿ ಹೇಳುವುದಾದರೆ ಎಂ.ಓ.ಯು ಎಂದು ಕರೆಯುತ್ತಾರೆ. ಪರಸ್ಪರ ಹಂಚಿಕೊಳ್ಳುವ ಗುಣವದು. ವ್ಯಕ್ತಿತ್ವದಲ್ಲಿಯೂ ಚಲನಶೀಲ ಗುಣಗಳು ಏಕಮುಖಚಿಂತನೆಯಲ್ಲಿ ಅಭಿವ್ಯಕ್ತಿಗೊಂಡಾಗ ಜ್ಞಾನ ವೃದ್ಧಿಗೊಳ್ಳುತ್ತದೆ ಎಂಬ ಆಶಯವನ್ನು ಕವಿ ಇಲ್ಲಿ ಪದವಾಗಿಸಿದ್ದಾರೆ.

**ಜಂಗಮ ಸ್ಥಾವರಗಳ**
**ಗೊಡವೆ**
**ಬಾಳೊಲುಮೆಗೇಕೆ?**

ಜಂಗಮ ಮತ್ತು ಸ್ಥಾವರ ಎಂಬ ಪದಗಳು ವಚನ ಸಾಹಿತ್ಯದ ಪರಿಕಲ್ಪನೆಗಳು. ಜಂಗಮ ಎಂದರೆ ಚಲನಶೀಲ ಸ್ವಭಾವ, ಸ್ಥಾವರ ಎಂದರೆ ಸ್ಥಗಿತ, ಒಂದೇ ಕಡೆ ನಿಲ್ಲುವ ಎಂದರ್ಥ. ನಿಲ್ಲುವುದಾಗಲಿ, ಚಲಿಸುವುದಾಗಲಿ ಎರಡೂ ನಿಯಮಬದ್ಧವಾದ ಕ್ರಿಯೆಗಳು. ಆದರೆ, ಬಾಳಿನ ಒಲುಮೆಗೆ ಇವುಗಳ ಸ್ವರೂಪವು ಹೊಂದಿಕೆಯಾಗುವುದಿಲ್ಲ. ಒಲುಮೆ ಎಂದರೆ ಪ್ರೀತಿ. ಈ ಒಲುಮೆಯು ಸದಾ ಚಲನಶೀಲವೂ ಅಲ್ಲ, ಸ್ಥಗಿತವೂ ಅಲ್ಲ. ಬಾಳನ್ನು ಆನಂದವಾಗಿಡಲು ಮನಸ್ಸನ್ನು ಹದಗೊಳಿಸುವ ಪ್ರಕ್ರಿಯೆ. ಅಲ್ಲಿ ಈ ಜಂಗಮ ಸ್ಥಾವರಗಳು ಮಿಳಿತವಾಗಿ ಮೈದಾಳಬಹುದು. ಕೆಲವೊಮ್ಮೆ ಇವುಗಳ ಹಂಗಿಲ್ಲದೆ ಭಾವಲೋಕದಲ್ಲಿ ವಿಹರಿಸಬಹುದು. ಒಲಮೆಯು ಭಾವದ ವಿಹಾರ. ಅಲ್ಲಿನ ರೆಕ್ಕೆಗಳಿಗೆ ಶಕ್ತಿಗಿಂತ ಪ್ರೀತಿ ಮಿಗಿಲು.

ಒಲುಮೆಯ ಜೋಡಿಗಳು ಎಲ್ಲಾ ಹಂಗುಗಳ ತೊರೆದು ತಾವು ಒಂದಾಗಲು, ವಿಶ್ವವನ್ನೇ ಮರೆಯುತ್ತವೆ. ಅಲ್ಲಿ ನಂಬಿಕೆ, ವಿಶ್ವಾಸ ಅತ್ಯಂತ ಧೀಮಂತವಾಗಿರುತ್ತದೆ. ಅದು ವೃದ್ಧಾಪ್ಯದವರೆಗೂ ಸದಾ ಚೈತನ್ಯದಿಂದಿರಬೇಕು ಅದುವೆ ಬಾಳೊಲುಮೆ.

**ಹೊಸ ತಿಂಗಳಲಿ**

**ಹಳತು ಹಿಂದಕೆ**

**ನಾವೂ ಅಂತೆಯೇ**

ಈ ನಮ್ಮ ಕ್ಯಾಲೆಂಡರ್ ಸಂಸ್ಕೃತಿಯೇ ಹೀಗೆ. ತಿಂಗಳು ಮುಗಿದ ಮೇಲೆ ಹಳತನ್ನು ಹರಿದು ಹೊಸ ತಿಂಗಳಿಗೆ ಹೊಂದಿಕೆಯಾಗುತ್ತೇವೆ. ನಾವೂ ಹಾಗೆಯೇ ನೆನ್ನೆಯದನ್ನು ಬಿಟ್ಟು ಇಂದಿನ ಹೊಸಹಂಬಲದಲ್ಲಿ ನಿತ್ಯವೂ ಸಾಗುತ್ತಿರುತ್ತೇವೆ. ಇಂದಿನ ನೋವು, ಸಾವು, ದುಃಖವು ನಾಳೆಗಿರುವುದಿಲ್ಲ. ಎಲ್ಲವೂ ನೆನಪಿನ ಲೋಕಕ್ಕೆ ಸೇರಿ ಹೊಸ ಬದುಕಿಗೆ ಹೊಂದಿಕೆಯಾಗುತ್ತೇವೆ. ಬೇಂದ್ರೆ ಅವರು ಮಧುರಚೆನ್ನರ ಸಾವನ್ನು ಕುರಿತು ವಿಷಾದ ಬರಹದಲ್ಲಿ 'ನೆನಪಿಗೆ ಮರಣವಿಲ್ಲ' ಎನ್ನುತ್ತಾರೆ. ಈ ಪದಗಳು ಹಳತನ್ನು ಗೌರವಿಸುತ್ತವೆ. ನೆನ್ನೆ ಹಿಂದಕೆ ಸರಿದರೂ ಕೂಡ ಉತ್ತಮ ಕಾರ್ಯಗಳ ಮೂಲಕ ಮೌಲ್ಯಯುತವಾಗಿ ನೆನಪಿನಲ್ಲಿ ಜೀವಂತವಾಗುವ ಕ್ರಿಯೆಗಳಾಗಿರುತ್ತವೆ.

ನಾವು ಹೊಸ ತಿಂಗಳಿನ ಸಂಭ್ರಮದಂತೆ ವಾಸ್ತವದ ಆಕಾಂಕ್ಷೆಗಳಲ್ಲಿ ಹಳತನ್ನು ಮರೆತು ಜೀವಿಸುತ್ತೇವೆ. ಉಷಾ ನವರತ್ನರಾಮ್ ಅವರ 'ನೆನ್ನೆ ನೆನ್ನೆಗೆ ! ನಾಳೆ ನಾಳೆಗೆ! ಕಾದಂಬರಿಯು ಇಲ್ಲಿ ಉಲ್ಲೇಖನೀಯ. ಸಿಂಗಪೂರ್‌ನಲ್ಲಿ ರಾಜಕುಳ್ಳ ಸಿನಿಮಾದಲ್ಲಿ ಚಿ. ಉದಯಶಂಕರ್ ಅವರು ಬರೆದ "ನೆನ್ನೆ ನೆನ್ನೆಗೆ ನಾಳೆ

ನಾಳೆಗೆ, ಇಂದು ನಮ್ಮದೆ ಚಿಂತೆ ಏತಕೆ" ಎಂಬ ಹಾಡು ಎಷ್ಟು ಪ್ರಸಿದ್ಧ ಅಲ್ಲವೆ.

**ದೇವರೂ**

**ದ್ವೇಷವನೊಲ್ಲ**

**ಅವ ಸದಾ ಪ್ರೇಮದ ಪರ**

ದೇವರೆಂದರೆ ನಮ್ಮ ಆತ್ಮೀಯ ನಂಬಿಕೆ. ದೇವರು ನಮ್ಮೊಳಗೆ ಇರುವ ಪ್ರೇಮದ ಸ್ವರೂಪ. ದೇವರು ಎಂದಿಗೂ ದ್ವೇಷವನ್ನು ಬಯಸುವುದಿಲ್ಲ. ಸದಾ ಪ್ರೇಮವನ್ನು ಸೃಷ್ಟಿಸಿ ಪ್ರತಿ ಜೀವಿಯನ್ನು ಸಮಾನವಾಗಿ ಕಾಣುವ ಶಕ್ತಿ ಸ್ವರೂಪವಾಗಿದೆ. ಜೀಸಸ್ ಆಗಲಿ, ಅಲ್ಲಾ ಆಗಲಿ, ವಿಷ್ಣು, ಶಿವ, ಲಕ್ಷ್ಮೀಯರಾಗಲಿ ನಮ್ಮ ಜನರ ಮನಸ್ಸಿನಲ್ಲಿ ಪ್ರೇಮದ ಸಂಕೇತಗಳಾದರೆ ಹೊರೆತು, ಯಾರನ್ನೂ ದ್ವೇಷಿಸುವ ಸೂಚಕಗಳಾಗಲಿಲ್ಲ. ಆದರೆ, ನಮ್ಮ ದ್ವೇಷದ ಮನಸ್ಸು ದೈವವೆಂಬ, ಶಕ್ತಿದೇವತೆಗಳೆಂಬ ಹೆಸರಿನಲ್ಲಿ ಕೊಲ್ಲುವ, ನಾಶಮಾಡುವ ದೇವರನ್ನು ಸೃಷ್ಟಿಸಿಕೊಂಡವು. ನಮ್ಮೊಳಗಿನ ನಂಬಿಕೆಯನ್ನು ನಾಶಮಾಡಿಕೊಂಡು ದೇವರ ಕುರಿತು ಹೀನ ಅಭಿಪ್ರಾಯಹೊಂದಿದೆವು. ಇನ್ನು ಇಂತಹ ಪ್ರೇಮದ ಶಕ್ತಿಯನ್ನು ಕಳಚಿಕೊಳ್ಳಲು ದೇವರನ್ನು ಸ್ಥಾವರಗಳಲ್ಲಿ ಸ್ಥಾಪಿಸಿದೆವು. ನಾವು ತಪ್ಪು ಮಾಡುತ್ತೇವೆ, ನೀನು ತಿದ್ದಬೇಕು ಎಂದು ಮೊರೆಯಿಟ್ಟೆವು. ಆದರೆ, ದೇವರು ನಮ್ಮೊಳಗೆ ಇರುವ ಅದ್ಭುತ ಚೈತನ್ಯ ಎಂಬುದನ್ನು ಜ್ಞಾನಿಗಳು ಮತ್ತೆ ಮತ್ತೆ ಹೇಳಿದರೂ ನಂಬದೆ, ಮೌಢ್ಯಗಳನ್ನಷ್ಟೆ ನಂಬುವ ಸಮಾಜ ಸೃಷ್ಟಿಯಾಯಿತು.

ಜ್ಞಾನವೇ ದೇವರು. ಅದು ನಮ್ಮೊಳಗಿನ ಪ್ರೇಮದ ಶಕ್ತಿ. ಎಲ್ಲರನ್ನೂ ಮುಕ್ತವಾಗಿ ಸ್ವೀಕರಿಸಿ, ಸರಿಯಾದ ಮಾರ್ಗದಲ್ಲಿ ಚಲಿಸಲು ಪ್ರೀತಿಯ ತತ್ವವನ್ನು ಹೇಳಿಕೊಡುತ್ತದೆ.

**ಕತ್ತಲೆ ಬೆಳಕು**

**ಎರಡೂ ಇರಬೇಕು**

**ಜಗದಲಿ**

ರಾತ್ರಿಯನ್ನು ಸೃಷ್ಟಿಸುವ ಕತ್ತಲಾಗಲಿ, ಹಗಲನ್ನು ಸೃಷ್ಟಿಸುವ ಬೆಳಕಾಗಲಿ ಸರಿಯಾದ ಆವೃತ್ತಿಯಲ್ಲಿ ನಮಗೆ ಅಗತ್ಯವಿದೆ. ಈ ಲೋಕದ ನಿರೂಪಕ ಶಕ್ತಿಯಾದ ಪ್ರಕೃತಿಯು ಕತ್ತಲು ಬೆಳಕಿನ ಮೂಲಕ ತನ್ನದೇ ಸೃಷ್ಟಿ ಪ್ರಕ್ರಿಯೆಗಳನ್ನು ಒಳಗೊಂಡಿದೆ. ಆಧುನಿಕತೆ ಹೆಸರಿನಲ್ಲಿ ನಮ್ಮ ಬದುಕು ವ್ಯವಹಾರ ಜಗತ್ತನ್ನು ಸೃಷ್ಟಿಸಿಕೊಂಡಿದೆ. ಹಗಲು ರಾತ್ರಿಗಳು ಏಕಮುಖ ಮಾಡಿ ದುಡಿಯುತ್ತಿವೆ. ನಗರಗಳು ನಿದ್ರಿಸುವುದಿಲ್ಲ. ಪ್ರಕೃತಿ ವಿರುದ್ಧ ಚಲಿಸುತ್ತಿದ್ದೇವೆ. ಈ ಬೆಳಕು–ಕತ್ತಲೆಯ ಸೃಷ್ಟಿ ಪರಿಣಾಮದಲ್ಲಿ ನಮ್ಮ ದೇಹ, ಮನಸ್ಸುಗಳಿದ್ದವು.

ಇಂತಹ ಸಹಜ ಚಲನೆಯನ್ನು ಮೀರುತ್ತಿದ್ದೇವೆ. ಈ ಕ್ರಮವನ್ನು ತಪ್ಪುವುದು ನಮ್ಮ ವಿನಾಶದ ಸಂಕೇತ. ಸರಿಯಾದ ಕ್ರಮವು ಜೀವಪರವಾಗಿರುತ್ತದೆ. ಅದರ ವಿರುದ್ಧ ಚಲಿಸದೆ, ಜೊತೆಯಲ್ಲಿ ಸಾಗಬೇಕು.

**ತಾಯ ಎದೆಹಾಲು**
**ಬರಿದಾದೀತು**
**ಪ್ರೀತಿ ರಸವಲ್ಲ**

ತಾಯಿಯ ಪ್ರೀತಿಯು ಅತ್ಯಂತ ಶ್ರೇಷ್ಠವಾದುದು. ಜಗತ್ತಿನ ಎಲ್ಲಾ ಭಾವಲೋಕದ ಧ್ವನಿಗಳೂ ಕೂಡ ತಾಯಿಯ ಪ್ರೀತಿಯನ್ನೇ ಕುರಿತಾಗಿವೆ. ಇದಕ್ಕೆ ವೈಜ್ಞಾನಿಕ ಹಾಗೂ ಕಲಾ ಲೋಕ ಉತ್ತರದಲ್ಲಿ ಆಕೆಯ ಒಂಬತ್ತು ತಿಂಗಳ ಮಮತೆಯೂ, ಎದೆಹಾಲಿನ ಮೂಲಕ ಜೀವತ್ರಾಣದ ಶಕ್ತಿಯನ್ನೂ ತಾಯಿಯು ಕರ್ತವ್ಯದಂತೆ ನೀಡುತ್ತಾಳೆ. ಆಕೆ ಇದನ್ನು ಬದುಕಿನ ಶ್ರೇಷ್ಠಕರ್ತವ್ಯವೆಂದು ನಿರ್ವಹಿಸುತ್ತಾಳೆ. ಎದೆಹಾಲು ಮುಗಿಯಬಹುದು. ಆ ತಾಯ ಪ್ರೀತಿಯಲ್ಲ. ಅದೊಂದು ಕರುಳ ಸಂಬಂಧ. ಮಣ್ಣಿನ ತನಕ ಹಂಬಲಿಸುವ ಏಕೈಕ ಪ್ರೀತಿಯೆಂದರೆ ತಾಯಿ ನೀಡುವ ಅನಂತ ಪ್ರೀತಿಯೊಂದೆ ಆಗಿದೆ. ಕನ್ನಡ ಸಾಹಿತ್ಯದಲ್ಲಿ ಅತಿ ಹೆಚ್ಚು ಕಾವ್ಯಪ್ರೀತಿಯು ದೊರೆತಿರುವುದು ತಾಯಿ ಪ್ರೀತಿ ಮತ್ತು ಸಖ ಸಖಿಯರ ಪ್ರೇಮವನ್ನು ಕುರಿತು ಮಾತ್ರ ಎನಿಸುತ್ತದೆ.

**ಶಿವ ಶಕ್ತಿ**
**ಶಕ್ತಿ ಶಿವ**
**ಪ್ರಕೃತಿಯ ವಿಸ್ಮಯ ಋತ**

ಶಿವ ಎಂಬ ಪದವು ಮಂಗಳಕರ, ವಿನಾಶಕಾರಿ ಎಂಬ ಅರ್ಥವನ್ನು ನೀಡುತ್ತದೆ. ಸಂಸ್ಕೃತದ ಶರ್ವ ಎಂಬ ಪದದಿಂದ ಬಂದಿದೆ. ಇದರರ್ಥ ದುಷ್ಟ ವಿನಾಶಕ ಎಂಬ ಅರ್ಥವನ್ನು ನೀಡುತ್ತದೆ. ಶಿವನೆಂಬ ಅರ್ಥವು ತ್ರಿಮೂರ್ತಿಗಳಲ್ಲಿ ಒಬ್ಬನಾಗಿ, ದೇವರೆಂದು ಪೂಜಿಸುವರು. ಆದರೆ, ಜನಪದರು ಶಿವನನ್ನು ಸಕಲ ಚರಾಚರದಲ್ಲೂ ವಿನಾಶದ ಸಂಕೇತವಾಗಿಯೂ, ಅಂತಿಮ ರುದ್ರನಾಗಿಯೂ ನೆನೆದಿದ್ದಾರೆ. ಈ ಶಿವನೇ ಜನಪದರ ಬದುಕಿನ ಶಕ್ತಿ. ಈ ಶಕ್ತಿಯೇ ಶಿವನ ಸ್ವರೂಪ. ಈ ಪ್ರಕೃತಿಯ ಕಾಲಚಕ್ರದ ಎಲ್ಲಾ ವಿಸ್ಮಯಗಳೂ ಇವನಿಂದಲೇ ನಡೆಯುತ್ತವೆ. ಈ ಶಬ್ದವೇ ಒಂದು ಲೀಲೆ. ಪ್ರಪಂಚದ ಸಾಕಷ್ಟು ದೇಶಗಳಲ್ಲಿ ಈ ಶಿವ ಆರಾಧನೆಗಳನ್ನು ವಿಭಿನ್ನವಾಗಿ ನಡೆಸುತ್ತಾರೆ. ಈ ಕುರಿತು ಸಂಶೋಧನೆಗಳು ನಡೆಯುತ್ತಿವೆ.

**ಸೂರ್ಯ ಚಂದ್ರರ**
**ಒಲವು ಭೂಮಿಗೆ**
**ಸದಾ ಪುಳಕವು**

**ಒಲವು ನದಿಯಂತೆ**
**ಹಿಮ್ಮುಖವಾಗೆಂದೂ**
**ಹರಿಯದು**

ಈ ಭೂಮಿಯ ಚಲನಶಕ್ತಿಯಾಗಿ, ಸಮತೋಲನ ಸ್ವರೂಪವಾದ ಪ್ರಕೃತಿಯನ್ನು ಕಾಪಾಡುತ್ತಿರುವ ಇತರ ಗ್ರಹ, ಉಪಗ್ರಹಗಳೆಂದರೆ ಹತ್ತಿರದ ಸೂರ್ಯ, ಚಂದ್ರವೆಂದು ಸಂಶೋಧಿಸಿದ್ದಾರೆ. ಹಗಲನ್ನು ಸೂರ್ಯನ ಬೆಳಕಿನಲ್ಲಿ, ರಾತ್ರಿಯನ್ನು ಚಂದ್ರನ ಬೆಳಕಿನಲ್ಲಿ ಕಳೆಯುವ ಈ ಜೀವಗಳಿಗೆ ಈ ಬೆಳಕುಗಳಿಂದಲೇ ಸದಾ ಆನಂದವು ಲಭಿಸುತ್ತದೆ. ಆ ಆನಂದವೇ ಕ್ರಿಯಾಶಕ್ತಿ, ಜೀವಶಕ್ತಿಯ ಸಂಸ್ಕಾರವೆಂದು ಕರೆಯುತ್ತಾರೆ.

**ಋತುಮಾನಕ್ಕೆ**
**ಹೊಸ ಉಮೇದು**
**ಇಳೆಗೆ ಜೀವಸೆಲೆ**

ಪ್ರಕೃತಿಯ ಬದಲಾವಣೆಗಳು ನಮ್ಮ ಕಲ್ಪನೆಯನ್ನೇ ಮೀರಿಸುತ್ತವೆ. ಕಾಲ ಕಾಲಕ್ಕೆ ಮಳೆಗಾಲ, ಚಳಿಗಾಲ, ಬೇಸಿಗೆ ಕಾಲಗಳು ಪರಿವರ್ತನೆಗೊಳ್ಳುತ್ತವೆ. ಈ ಪರಿವರ್ತನೆಯ ಫಲವಾಗಿ ಪ್ರಕೃತಿಯಲ್ಲಿ ಹೊಸ ಉತ್ಸಾಹ, ಭರವಸೆಗಳು ಕಾಣಿಸುತ್ತವೆ. ಇಂತಹ ಬದಲಾವಣೆಗಳು ಭೂಮಿಯ ನಿಜವಾದ ಚೈತನ್ಯವೆನ್ನಬಹುದು.

ಪ್ರಕೃತಿಯ ಪ್ರತಿ ಜೀವಿಗೂ ಶಕ್ತಿಯಾಗಿ ಹಂಚುವ ಈ ಪ್ರಕ್ರಿಯೆಯನ್ನು ನಿತ್ಯ ಕಾಣಬಹುದು. ಸ್ವೀಕರಿಸುವ ಮನಸ್ಸಿದ್ದರೆ ಸಾಕು, ಕಾಲವೇ ಕರ್ತೃ ನಮಗೆ. ಇದು ನಮ್ಮ ಶರೀರ, ಆಲೋಚನೆ ಹಾಗೂ ಜೀವನದ ಮೇಲೆ ಪರಿಪೂರ್ಣ ಪ್ರಭಾವ ಬೀರುತ್ತದೆ. ಇದನ್ನೇ ಆಯುರ್ವೇದದಲ್ಲಿ 'ಋತು ಶೋಧನ'ವೆನ್ನುವರು.

**ನನ್ನಿಂದ ಸಾಧ್ಯ**
**ನಿಲವೆ ಗೆಲುವು**
**ನನ್ನಿಂದ ಸಾಧ್ಯವೆ?**

ಈ ಕವಿತೆಯಲ್ಲಿ ಎರಡು ಅಂಶಗಳಿವೆ. ಅವುಗಳೆಂದರೆ ಭರವಸೆ ಮತ್ತು ಪ್ರಶ್ನೆ. ನನ್ನಿಂದ ಸಾಧ್ಯವೆಂಬ ಭರವಸೆಯು ಎಲ್ಲರಲ್ಲೂ ಇರುತ್ತದೆ. ಆದರೆ, ನನ್ನಿಂದ ಸಾಧ್ಯವೇ ಎಂಬ ಭಯವೂ ತನ್ನೊಳಗೆ ಸದಾ ಕಾಡುವ ಪ್ರಶ್ನೆಯಾಗಿರುತ್ತದೆ. ನಾವು ಯಾವುದೇ ತೀರ್ಮಾನಗಳನ್ನು ಹೊಂದುವಾಗ ಮೊದಲಿಗೆ ನನ್ನಿಂದ ಸಾಧ್ಯವೆಂಬ ನಿಲುವನ್ನು ಹೊಂದಬೇಕು. ನಂತರ, ಕ್ರಿಯೆಯಲ್ಲಿ ತೊಡಗಿದಾಗ ನನ್ನಿಂದ ಸಾಧ್ಯವೇ ಎಂಬ ಪ್ರಶ್ನೆಯು, ಕೊನೆಯ ಹಂತದವರೆಗೂ ನಮ್ಮಲ್ಲಿ ಅಹಂಕಾರ ಧಮನವಾಗಿ ಕೆಲಸ ಮಾಡಬೇಕು. ಎಷ್ಟೋ

ಸಂದರ್ಭದಲ್ಲಿ ನಮ್ಮ ಅಹಂಕಾರವೇ ನಮ್ಮನ್ನು ಸೋಲಿಸಿರುತ್ತದೆ. ಗೆಲುವೆಂಬುದು ಸದಾ ಪ್ರಯತ್ನದ ಭರವಸೆಯಾಗಬೇಕೇ ಹೊರೆತು, ಆಲಸ್ಯ, ಅಹಂಕಾರದ ನಿಲುವಾಗಬಾರದೆಂಬ ಎಚ್ಚರವಿಲ್ಲಿದೆ.

ಪ್ರತಿ ವಿಜ್ಞಾನಿಯು ತನ್ನ ಸಂಶೋಧನೆಯಲ್ಲಿ ಇಂತಹ ಖಚಿತತೆಯನ್ನು ಸದಾ ಹೊಂದಿರುತ್ತಾರೆ. ಸೋಲನ್ನು ಸ್ವೀಕರಿಸುವ ಶಕ್ತಿಯನ್ನು ಪ್ರತಿ ಕ್ಷಣವೂ ಅನುಭವಿಸುತ್ತಾ ಗೆಲುವನ್ನು ಪಡೆಯುತ್ತಾರೆ. ಆ ಗೆಲುವನ್ನು ಕೂಡ ಮುಂದಿನ ಕಾರ್ಯಕ್ಕೆ ಸ್ಫೂರ್ತಿಯಾಗಿ ಭಾವಿಸುತ್ತಾರೆ ಹೊರೆತು, ಪೂರ್ಣ ಫಲಿತವೆಂದು ತನ್ನ ಜ್ಞಾನದ ಕಾರ್ಯವನ್ನು ನಿಲ್ಲಿಸುವುದಿಲ್ಲ.

## ದೇವರೆಂಬ
## ನಂಬಿಕೆ ನಿಜವು
## ಅಲ್ಲದಿರಬಹುದು

ನಮ್ಮಲ್ಲಿ ಆಸ್ತಿಕರು ಹಾಗೂ ನಾಸ್ತಿಕರೆಂಬ ಎರಡು ವಿಧಗಳಿವೆ. ಆಸ್ತಿಕರೆಂದರೆ ಪರಮ ಭಕ್ತರು. ದೇವರನ್ನು ಕುರಿತು ತುಂಬಾ ಭಕ್ತಿ ಉಳ್ಳವರು. ಜಗತ್ತಿನ ಪ್ರತಿ ಕ್ರಿಯೆಯನ್ನು ದೇವರ ಲೀಲೆಯೆಂದು, ಸದಾ ಭಯದ ಭಕ್ತಿಯಲ್ಲಿಯೇ ಬದುಕುವವರು. ನಾಸ್ತಿಕರು ಇದರ ವಿರುದ್ಧ ಚಿಂತಿಸುವವರು. ಬದುಕನ್ನು ವೈಜ್ಞಾನಿಕವಾಗಿ ಆಲೋಚಿಸಬೇಕು. ದೇವರೆಂಬುದು ಸುಳ್ಳು, ಪುರೋಹಿತರು ತಮ್ಮ ಹೊಟ್ಟೆಪಾಡಿಗಾಗಿ ರೂಪಿಸಿಕೊಂಡ ತಂತ್ರವದು. ಅಜ್ಞಾನಗಳಲ್ಲಿ ಭಯ ಹುಟ್ಟಿಸಿ, ಅದನ್ನೆ ಬಂಡವಾಳ ಮಾಡಿಕೊಂಡಿದ್ದಾರೆ ಎಂದು ವಾದಿಸುತ್ತಾರೆ. ನಾಸ್ತಿಕರು ಪ್ರತಿ ವಿಚಾರವನ್ನು ವೈಜ್ಞಾನಿಕವಾಗಿ ಆಲೋಚಿಸುತ್ತಾ, ಸರಿ ತಪ್ಪುಗಳನ್ನು ನಿರ್ಧರಿಸುತ್ತಾರೆ.

ಅದರೆ, ಇವರಿಬ್ಬರ ನಡುವೆ ಇನ್ನೂ ಎರಡು ವರ್ಗಗಳಿವೆ. ದೇವರನ್ನು ನಂಬುವ ಹಾಗೂ ಕೆಲವು ವೇಳೆ ನಂಬದಿರುವ ಇಬ್ಬಂದಿ ಸ್ಥಿತಿಯಲ್ಲಿ ಬದುಕುತ್ತಾರೆ. ನಮ್ಮ ದೇವರು ಸರಿ, ಶಕ್ತಿಯುತ. ಉಳಿದ ದೇವರು ಅಷ್ಟೇನು ಶಕ್ತಿಯನ್ನು ಹೊಂದಿಲ್ಲವೆಂಬ ಮೂಢನಂಬಿಕೆಯನ್ನು ಕೂಡ ಒಳಗೊಂಡಿರುತ್ತಾರೆ. ಅವಕಾಶವಾದಿತನದಲ್ಲಿ ನಾಸ್ತಿಕರೆದುರು ದೇವರಿಲ್ಲವೆಂದು, ಆಸ್ತಿಕರೆದುರು ದೇವರ ನಿಜವಾದ ಭಕ್ತ ತಾನೆಂದು ನಂಬಿಸುತ್ತಾರೆ. ಈ ನಾಲ್ಕನೆಯ ವರ್ಗವು ಇವರೆಲ್ಲರಿಗಿಂತ ವಿಭಿನ್ನವಾದವರು. ದೇವರೆಂಬ, ನಂಬಿಕೆ ನಿಜವು, ಅಲ್ಲದಿರಬಹುದು ಎಂಬ ಚಿಂತನೆ ಇವರದು. ದೇವರು ನಂಬುವವರ ರೂಪದಲ್ಲಿ ಅಡಗಿರುತ್ತದೆ.

ಕೆಲವರು, ವಸ್ತು–ಮರ–ಕಲ್ಲು ಮೊದಲಾದವುಗಳಿಂದ ರಚಿಸಿದ ಮೂರ್ತಿಗಳು ಹಾಗೇಯೇ ಕೆಲವರು ತಮ್ಮ ಮನವೇ ದೇವರು ಎಂಬ ನಂಬಿಕೆಯನ್ನು ನಿರೂಪಿಸುತ್ತಾರೆ. ನಂಬದಿದ್ದರೆ, ದೇವರು ಇಲ್ಲದೆಯೂ ಇರಬಹುದು. ಯಾರನ್ನೂ ವಿರೋಧಿಸಿದೆ, ಯಾವುದರಲ್ಲೂ ಅತಿ ತೋರದೆ ತಮ್ಮದೇ ಸಿದ್ಧಾಂತದಲ್ಲಿ

ಬದುಕುವವರು. ಇವರು ಯಾರಿಗೂ ಅಪಾಯವಲ್ಲ ಎನಿಸುತ್ತದೆ.

**ಬಡತನದ ಬೇಗೆ**
**ನಿಟ್ಟುಸಿರಲ್ಲೇ**
**ನೀಗಿಕೊಂಡಿತು**

ದ. ರಾ. ಬೇಂದ್ರೆ ಅವರು ಬಡತನ ಬಲಿಯಾಗ ಬಾಳ್ವೀಯ ಒಲಿಮ್ಯಾಗ ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಂಗವೆಂದು ಬಡತನಕ್ಕೆ ಅರ್ಥಪೂರ್ಣ ವ್ಯಾಖ್ಯಾನ ನೀಡಿದರು. ಬಡತನವು ಸಾಹಿತ್ಯದ ವಸ್ತುವೆಂದು ನಿರೂಪಿಸಿದರು. ಈ ಬಡತನವೇ ಹೀಗೆ ಅನುಭವಿಸಿದವರಿಗಷ್ಟೇ ಗಾಢ ಅನುಭವವವು. ಅದರ ನಿಟ್ಟುಸಿರಲ್ಲೇ ಅದೆಷ್ಟೋ ಜನ ಬದುಕನ್ನು ಪೂರ್ಣಗೊಳಿಸಿದ್ದಾರೆ. ಅವರಲ್ಲಿ ಬಡತನದಿಂದ ಆಚೆ ಬರುವಷ್ಟು ಶಕ್ತಿ ಇರುವುದಿಲ್ಲ. ಸರ್ಕಾರದ ಯೋಜನೆಗಳಾದರೂ, ಹಸಿವು ತುಂಬಿಸಿಕೊಂಡು ಹೊಟ್ಟೆಹೊರೆಯುವ ಸಾಂತ್ವಾನಗಳಾಗಿವೆ. ಜ್ಞಾನ, ಹಣ ಹಾಗೂ ಪರಿಸರಗಳು ಅವರನ್ನು ಅದರಾಚೆ ಜಿಗಿಯದಂತೆ ಬಂಧಿಸಿರುತ್ತವೆ. ಬಡತನದ ನೋವು, ಅದರಲ್ಲೆ ನೊಂದು ಬೆಂದು ಕೊನೆಯುಸಿರೆಳೆಯುವ ರೂಪವಾಗಿರುತ್ತದೆ. ಆದರೆ, ಇಲ್ಲಿ ದಿಟ್ಟ ಬದಲಾವಣೆಗಳು ಹೆಜ್ಜೆ ಇಡಬೇಕಾಗಿದೆ. ಋಣ ಅಥವಾ ಕೆಲವು ನಂಬಿಕೆಗಳನ್ನು ಕಳಚಿ ಜ್ಞಾನವನ್ನು ಕಲಿತರೆ, ಹಣವು ತಾನಾಗಿಯೇ ಬರುತ್ತದೆ. ಸೋಲನ್ನು ಅಪ್ಪಿಕೊಳ್ಳುವ ಧೈರ್ಯವೂ ಬೇಕಾಗುತ್ತದೆ. ಬಡವರನ್ನು ಭಯವೇ ನಾಶಮಾಡಿರುವುದು. ಇವರಿಗೆ ಜ್ಞಾನದ ಧೈರ್ಯ ಬೇಕಾಗಿದೆ.

**ಪರಿಶುದ್ಧ ಬಾಳೂ**
**ಕವಿತೆಯೆ, ಬರೀ**
**ಪದಗಳಲ್ಲ.**

ಕವಿತೆಯಾಗುವುದೆಂದರೆ ತಾನು ತನ್ನನ್ನು ಶುದ್ಧಮಾಡಿಕೊಳ್ಳುವ ಸುಲಭ ವಿಧಾನ ಎಂದರ್ಥ. ಲೋಕವನ್ನು ಅವರವರ ಆಲೋಚನೆಗಳ ಮೂಲಕವೇ ತಿದ್ದಬಹುದಾದ ಕವಿಸಮಯದ ಕೀಲಿ ಕೈ ಆಗಿ ಕವಿತೆ ಕೆಲಸಮಾಡುತ್ತದೆ. ಅದೊಂದು ಪರಿಶುದ್ಧ ಬಾಳನ್ನು ಅನಂತ ಕಾಲಕ್ಕೆ ಚೇತನಗೊಳಿಸುವ ವಿಧಾನ ಎನ್ನಬಹುದು. ಆದರೆ, ಕವಿತೆ ಹುಟ್ಟಿದ ಅಂದಿನಿಂದಲೂ ಪರಿಶುದ್ಧ ಬಾಳಿನ ರಚನೆಯಾಗಿ ಕವಿತೆ ಕಟ್ಟುವವರು ಎಷ್ಟು ಜನರಿಗೆ ಇದೊಂದು ಯಕ್ಷಪ್ರಶ್ನೆಯಾಗಿದೆ. ಕವಿತೆ ಪರರಿಗೆ, ಅದರ ಲಾಭವು ತಮಗೆ ಎಂಬ ಅವಕಾಶವಾದಿಗಳೇ ತುಂಬಿರುವಾಗ ಈ ಕವಿಗಳನ್ನು ಪ್ಲೇಟೋ ರಾಜ್ಯದಿಂದ ಹೊರಹಾಕಲು ಹೇಳಿದ್ದು ತಪ್ಪೇನಲ್ಲ. ಇವರು ಸುಳ್ಳು ಹೇಳುವುದು. ಸತ್ಯದಾಚೆ ಕಲ್ಪಿಸುವುದು, ಬರಿ ಭ್ರಮೆ ಮೂಡಿಸುವುದು, ವಾಸ್ತವದಾಚೆಯ ಅರ್ಥಗಳನ್ನು ಬರಿ ಪದಗಳಲ್ಲಿ ತುಂಬಿಸುವುದು ಕವಿಗಳ ಕಲೆಯಾಗಿದೆ. ಇಂದು ಕೋಟಿ ಕೋಟಿ ಕವಿತಾ

ಸಂಕಲನಗಳು ರಚನೆಯಾಗಿ, ತಾವು ಕವಿಗಳೆಂದು, ಪ್ರಖ್ಯಾತ, ಕುಖ್ಯಾತ ಹೆಸರುಗಳನ್ನು ಧರಿಸಿದ್ದಾರೆ. ಬೆಂಬಲಗಳ ಮೂಲಕ ಪ್ರಶಸ್ತಿಯನ್ನು ಗಳಿಸಿಕೊಂಡು, ಪಠ್ಯಪುಸ್ತಕ ಹಾಗೂ ಸನ್ಮಾನಗಳಲ್ಲಿ ದಾಖಲಾಗುತ್ತಾರೆ. ಸಮಾಜ ಇವರನ್ನು ಕವಿಯೆಂದು ನಂಬುತ್ತದೆ. ಪರಿಶುದ್ಧ ಬಾಳಿನ ಕಡೆಗೆ ಸ್ವಲ್ಪವೂ ಆಲೋಚಿಸಲಾರರು.

ನಿಜವಾದ ಕವಿತೆಯೆಂದರೆ, ಪರಿಶುದ್ಧವಾಗಿ ಬದುಕುವುದು. ಪದಗಳಲ್ಲಿ ತುಂಬಿರುವ ಆದರ್ಶವಲ್ಲ. ನಮ್ಮ ನಡುವೆಯೇ ಸಾವಿರಾರು ಜನರು, ತಮ್ಮ ಬಾಳನ್ನು ನಿತ್ಯ ಪರಿಶೀಲಿಸಿಕೊಳ್ಳುತ್ತಾ ಪರಿಶುದ್ಧಗೊಳ್ಳುತ್ತಾರೆ. ತನ್ನ ತಾನು ಅರಿಯುವುದೇ ಇವರ ಬಾಳ್ವೆ. ವಚನಕಾರರು ನುಡಿದಂತೆ ನಡೆದರು. ತನ್ನನ್ನೇ ತಾನು ಕಂಡುಕೊಳ್ಳುವ ದಾರಿಯನ್ನು ತೋರಿಸಿಕೊಟ್ಟರು. ಇದುವೆ ನಿಜವಾದ ಕವಿತೆ. ಕವಿತೆ ಹೇಳಬಾರದು, ಇರಬೇಕು ಎಂಬಂತೆ ಕವಿತೆಯು ತನ್ನೊಳಗಿನ ಬಾಳ್ವೆ. ಅದರ ಬೆಳಕೇ ನಿಜವಾದ ಆದರ್ಶವಾಗಿದೆ.

**ಬಾಳ್ವೆಗೆ ಅಡಿಪಾಯ**
**ಯೌವನದ**
**ಬೆವರಹನಿ**

ಯೌವನದಲ್ಲಿ ಯಾರು ಕಷ್ಟ ಪಡುವರೋ, ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಳ್ಳಬಲ್ಲರು. ಅದು ವಿದ್ಯೆಯ ಮೂಲಕವೇ ಆಗಲಿ, ಕುಟುಂಬದ ಮೂಲಕವೇ ಆಗಲಿ, ಉದ್ಯೋಗದ ಮೂಲಕವೇ ಆಗಲಿ ಶ್ರಮದಿಂದ ನಿರ್ಮಿಸಿಕೊಳ್ಳಬೇಕು. ಇನ್ನೊಬ್ಬರನ್ನು ನಂಬಿ, ಗಳಿಸಿರುವ ಆಸ್ತಿಯನ್ನು ನಂಬಿ ಶ್ರಮಿಸದೇ ಸೋಮಾರಿಯಾದರೆ ಪಶುವಿಗಿಂತಲೂ ಕಡೆಯಾಗುತ್ತೇವೆ ಎಂಬ ನುಡಿಗಳಿವೆ. ಆದ್ದರಿಂದ ಯೌವನದ ಬೆವರು ಎಂದರೆ ಶ್ರಮ ನಮ್ಮ ಬಾಳ್ವೆಗೆ ನಿಜವಾದ ಅಡಿಪಾಯವನ್ನು ರೂಪಿಸಿಕೊಳ್ಳುವುದು. ಯುವಕರು ಕಷ್ಟಪಟ್ಟು ದುಡಿದರೆ, ಇರುವ ಸಂಪತ್ತು ಹೆಚ್ಚುತ್ತದೆ. ಬಾಳ್ವೆಗೆ ನೆಮ್ಮದಿ ದೊರೆಯುತ್ತದೆ.

**ಗಡಿಗಳಿರುವುದು**
**ಹೊರಗಲ್ಲ**
**ನಮ್ಮೀ ಎದೆಯಲ್ಲಿ**

ಕಾಲ–ದೇಶ–ಸ್ಥಳಗಳ ಕುರಿತು ನಮ್ಮಲ್ಲಿಯೇ ಹಲವು ಗಡಿಗಳಿವೆ. ಆ ಗಡಿಗಳು ಹಲವು ಮಾದರಿಯಲ್ಲಿ ಇರಬಹುದು. ಅವುಗಳ ಮೂಲಕ ನಾವು ಪರಸ್ಪರರು ಅಂತರ ಕಾಯ್ದುಕೊಂಡು ಜಗತ್ತಿನ ವಿಷಮ ಸ್ಥಿತಿಗೆ ಕಾರಣರಾಗಿದ್ದೇವೆ. ಒಳ ಜಗಳ, ಕ್ರೋಧಗಳಿಗೆ ಬಲಿಯಾಗಿ ನಮ್ಮ ವಾತಾವರಣವನ್ನು ಕಲುಷಿತಗೊಳಿಸಿದ್ದೇವೆ. ಇಂತಹ ಗಡಿಗಳು ರಾಜ್ಯ, ಧರ್ಮ, ಜಾತಿ, ಲಿಂಗಗಳ ನಡುವೆ ಇರುವುದಿಲ್ಲ. ನಮ್ಮ ಸ್ವಾರ್ಥಕ್ಕಾಗಿ ರೂಪಿಸುತ್ತಿದ್ದೇವೆ.

ನಿಜವಾಗಿಯೂ ನಮ್ಮ ಎದೆಯಲ್ಲಿ ಅಂದರೆ ಮನಸ್ಸಿನಲ್ಲಿಯೇ ಇಂತಹ ಗಡಿಗಳು ರೂಪುಗೊಂಡು ನಮ್ಮ ವಿನಾಶಕ್ಕೆ ನಾವೇ ಕಾರಣರಾಗಿದ್ದೇವೆ. ಜಿ.ಎಸ್.ಎಸ್ ಹೇಳುವಂತೆ 'ಹತ್ತಿರವಿದ್ದೂ ದೂರ ನಿಲ್ಲುವೆವು ನಮ್ಮ ಅಹಮ್ಮಿನ ಕೋಟೆಯಲಿ' ಎಂಬಂತೆ ನಮ್ಮೊಳಗಿನ ತಿಳಿಯನು ನಾವೇ ಕಾಣದಾಗಿದ್ದೇವೆ.

ಈ ಕವಿತೆಯು ನಮ್ಮ ಮನಸ್ಸಿನ ಗಡಿಗಳನ್ನು ಕಳಚಿಕೊಂಡು, ಪರಸ್ಪರರೂ ಮನುಷ್ಯರೇ ಆಗಿ, ನಮ್ಮ ಅನುಕೂಲಕ್ಕಿರುವ ಈ ಪ್ರಕೃತಿಯನ್ನು ಕಾಪಾಡುವ ಜೀವ ಚೈತನ್ಯವನ್ನು ತಿಳಿಸುತ್ತಿದೆ.

**ಜ್ಞಾನಿ ನಾನೆಂಬ**
**ಭ್ರಮೆಯು ನನ್ನ**
**ಬೆನ್ನಿಗಂಟಿದ ಶತ್ರು**

**ಬಾಗುವುದ ಕಲಿಸು**
**ಓ ಚೇತನವೇ**
**ಬೀಗುವುದನ್ನಲ್ಲ**

ಬಿ.ಟಿ. ಲಲಿತಾ ನಾಯಕ್ ಅವರ ಕವಿತೆಯು 'ನಾ ಮೇಲಿನವನು ಬಲು ದೊಡ್ಡವನು ಎಂದು, ಮೆರೆದಾಡ ಬೇಡ ಗೆಳೆಯ, ನಿನಗಿಂತ ಮಿಗಿಲವರು ಇದ್ದಾರೋ ಭುವಿಯಲ್ಲಿ ಸುಳ್ಳು ಭ್ರಮೆಯಲ್ಲಿ ನೀ ಮುಳುಗಬೇಡ' ಎಂಬ ಸಂದೇಶ ನೀಡುತ್ತದೆ. ನಾವು ಅದೆಷ್ಟೇ ಎತ್ತರಕ್ಕೆ ಬೆಳೆದರೂ, ನಾವು ಕಲಿಯುವುದು ಬಹಳ ಇರುತ್ತದೆ. ನಮಗಿಂತಲೂ ವಿಭಿನ್ನ ಜ್ಞಾನ, ಕೌಶಲ್ಯವನ್ನು ಮತ್ತೊಬ್ಬರು ತಿಳಿದಿರುತ್ತಾರೆ. ನಾನೇ ನಿಜವಾದ ಜ್ಞಾನಿ, ಪಂಡಿತ, ರಾಷ್ಟ್ರ ಪ್ರಶಸ್ತಿ ಪಡೆದವ, ಪುರಸ್ಕೃತ, ಸಂಶೋಧಕ, ವಿಜ್ಞಾನಿ ಮೊದಲಾದ ಅಲ್ಪ ಹೊಗಳಿಕೆಗಳು ನಮ್ಮ ಸಣ್ಣತನಗಳನ್ನು ಸೂಚಿಸುತ್ತವೆ. ಇದುವೆ ನಮ್ಮ ಬೆನ್ನಿಗಂಟಿದ ಶತ್ರು. ಸದಾ ಹೊಗಳಿಕೆಯ ಭ್ರಮೆಯಲ್ಲಿ ಬದುಕಬಾರದು. ಒಳಿತನ್ನು ಗೌರವಿಸುವ, ಜ್ಞಾನಿಗಳಿಗೆ ತಲೆಬಾಗುವ, ತಪ್ಪು ತಿದ್ದಿಕೊಳ್ಳುವ ಎಲ್ಲಕ್ಕೂ ಮುಖ್ಯವಾಗಿ ಕೇಳುವ ಕಿವಿಯಾಗುವ ಗುಣವನ್ನು ಪಡೆಯಬೇಕು. ಬದುಕು ಇಂದಿಗೆ ಮುಕ್ತಾಯವಲ್ಲ. ಇದೊಂದು ಚೇತನ ದೀಪ್ತಿ. ನಾನೇ ಎಂಬ ಅಹಂಕಾರ ಬಿಟ್ಟು, ನಾವು ಎಂಬ ಸಂಸ್ಕಾರ ಬರಬೇಕಾಗಿದೆ. ಈ ಮೇಲಿನ ಎರಡೂ ಹಾಯ್ಕುಗಳು ಮನುಷ್ಯನ ಅಹಂ ಭಂಜನಕ್ಕೆ ನಿರ್ದೇಶನ ನೀಡುತ್ತವೆ.

**ಸರಕುಗಳ ರಾಶಿ**
**ಮನೆಯಲ್ಲ**
**ಅಂತಃಕರಣವು**

**ಹೃದಯಕ್ಕೆ ಕಣ್ಣಾಗು**
**ಮೆದುಳಿಗೆ**
**ಕಿವಿಯಾಗು ನೀ**

ಈ ಎರಡೂ ಹಾಯ್ಕುಗಳನ್ನು ಒಟ್ಟಿಗೆ ನೋಡುವ ಪ್ರಯತ್ನವಿಲ್ಲಿದೆ. ಇವು ಓದುಗರ ದೃಷ್ಟಿಯಲ್ಲಿ ಅವರವರದೇ ವಿಭಿನ್ನ ಅರ್ಥಗಳನ್ನು ಪಡೆಯಬಹುದು. ನಾವು ಇನ್ನೊಬ್ಬರಿಗೆ ತೋರುವ ಅಂತಃಕರಣವು ಹೇಗಿರಬೇಕು ಎಂಬುದಕ್ಕೆ ಇಲ್ಲಿ ಉತ್ತರವಿದೆ. ಹೃದಯಕ್ಕೆ ಕಣ್ಣಾದರೆ, ಪ್ರೀತಿ ಹುಟ್ಟುತ್ತದೆ. ಎದುರಿನ ವ್ಯಕ್ತಿಯು ಕೂಡ ಅರ್ಥವಾಗುತ್ತಾರೆ. ನಮ್ಮನ್ನು ನಾವು ಅರಿತಾಗ ಹೃದಯಕ್ಕೆ ಕಣ್ಣಾಗುವ ಹಂತವನ್ನು ತಲುಪುತ್ತೇವೆ. ಇನ್ನೊಬ್ಬರ ಸಲಹೆ, ನುಡಿಗಳನ್ನು ಕೇಳುವಾಗ, ಅವರಿಗೂ ಜ್ಞಾನವಿದೆ ಎಂಬ ಗೌರವ ನಮಗಿರಬೇಕು. ಈ ಕಾರಣದಿಂದಲೇ ಮೆದುಳಿಗೆ ಕಿವಿಯಾಗುವ ಆಕಾಂಕ್ಷೆ ಇಲ್ಲಿದೆ. ಆಗ ಮಾತ್ರ ನಾವು ಅಂತಃಕರಣ ತುಂಬಿದ ಜೀವವಾಗುತ್ತೇವೆ. ಬದುಕೆಂಬುದು ಚಿನ್ನ, ಬೆಳ್ಳಿ, ವಸ್ತು, ಸೌಂದರ್ಯಗಳ ಸರಕಾಗಿ ಉಳಿದಿಲ್ಲ. ಅಂತಿಮವಾಗಿ ನಿವೇದಿಸುವ 'ನೆಮ್ಮದಿ' ಅಷ್ಟೇ ಈ ಬಾಳ್ವೆಯ ಗುಟ್ಟು. ಅಂತಃಕರಣವು ಇರುವ ಪ್ರತಿ ಹೃದಯವೂ ನೆಮ್ಮದಿಯನ್ನು ಬಯಸುತ್ತದೆ. ಕ್ರೋಧಗಳ ಕಳಚುತ್ತದೆ.

**ಸೇಡು ತೀರಿಸಲು**
**ಕತ್ತಿ ತೆಗೆಯದೆ**
**ಕ್ಷಮಿಸು ಸಾಕು**

ಬುದ್ಧನು ಅಂಗುಲಿಮಾಲನ ಕೋಪಕ್ಕೆ ನೀಡಿದ ದರ್ಶನವೇ ಕ್ಷಮಿಸುವ ಗುಣ. ಹಿಂಸೆಗೆ ಹಿಂಸೆಯೇ ಮದ್ದಲ್ಲ, ಯಾವುದೇ ತಪ್ಪುಗಳನ್ನು ಕ್ಷಮೆಯ ಮೂಲಕ ತಿದ್ದಬಹುದು. ಸಾಮಾನ್ಯವಾಗಿ ಭಾರತದ ಶಾಂತಿ ನೀತಿಯು ಇದನ್ನೇ ತಿಳಿಸುತ್ತದೆ. ಪ್ರಪಂಚದಲ್ಲಿಯೇ ವಿಭಿನ್ನವಾದ ಕಾನೂನು ಹಾಗೂ ರಕ್ಷಣೆಯ ಜವಾಬ್ದಾರಿಯನ್ನು ನಮ್ಮ ಸಂವಿಧಾನವು ನೀಡಿದೆ. ಜೈಲುಗಳು ಪರಿವರ್ತನೆಯ ಕೇಂದ್ರಗಳಾಗಿವೆ. ಒಳ್ಳೆಯವರಿಗೆ ಉಪನ್ಯಾಸ ನೀಡಿ ಕಾಲಹರಣ ಮಾಡುವ ಬುದ್ಧಿಜೀವಿಗಳು ಇಂತಹ ಜೈಲುಗಳಿಗೆ ಹೋಗಿ ಅಪರಾಧಿಗಳ ಬದುಕಿಗೆ ಚೈತನ್ಯ ನೀಡಬೇಕಿದೆ. ಕುಟುಂಬದಲ್ಲಿ ಚಿಕ್ಕಪುಟ್ಟ ತಪ್ಪುಗಳಿಗೂ ಕೊಲೆ, ನೇಣು, ಜೈಲು ಎಂಬಂತೆ ನಾಶದ ಹಂತ ತಲುಪುತ್ತಿದ್ದಾರೆ. ದ್ವೇಷವೆಂಬ ಕತ್ತಿಯು ಇನ್ನೂ ಪರಿಣಾಮಕಾರಿಯಾಗಿ ನಿತ್ಯವೂ ಚುಚ್ಚುವ ಪರಿಯಂತು ಅತಿಹೀನವಾದುದು. ಇಲ್ಲೆಲ್ಲಾ ಜ್ಞಾನದ ಕೊರತೆ ಇದೆ. ಕ್ಷಮೆಯೆಂಬ ಚಿಕ್ಕ ಭಾವವು ಈ ಎಲ್ಲಾ ತಪ್ಪುಗಳಿಗೂ ಉತ್ತರ ನೀಡುತ್ತದೆ. ದ್ವೇಷದಲ್ಲೂ ಪ್ರೀತಿಯ ಚಿಗುರುಟ್ಟಿ ಮನೆಮನಗಳು ಉಳಿಯುತ್ತವೆ.

ವೀರಪ್ಪನ್‌ನಂತಹ ಅಪರಾಧಿಯನ್ನು ನಾವು ಕೊಂದು ಹಾಕಿದೆವು. ಆದರೆ ಅವನಲ್ಲಿದ್ದ ಪರಿಸರ

ಜ್ಞಾನ, ಯೋಗ ಪ್ರಬುದ್ಧತೆಗಳು ನಾಶವಾದವು. ಸೇಡು ತೀರಿಸಲು ನಾಶಕ್ಕಿಂತ ಪರ್ಯಾಯ ಮಾರ್ಗ ಹುಡುಕಬೇಕಿದೆ. ನಮ್ಮ ಕಾನೂನುಗಳ ಜವಾಬ್ದಾರಿಗೆ ಇನ್ನೂ ವಿಭಿನ್ನ ಚಿಂತನೆಗಳು ಸೇರಬೇಕಿದೆ.

**ಈ ಬದುಕಿನ**

**ಎರಡು ಗಾಲಿಗಳು**

**ದುಡಿಮೆ, ತಾಳ್ಮೆ**

ಬದುಕೆಂದರೆ, ಯಾವುದಾದರೊಂದು ಕಾರ್ಯದಲ್ಲಿ ತೊಡಗುವುದು. ಅದು ಸಂಬಳದ ಕೆಲಸ ಮಾತ್ರವಲ್ಲ. ಮನುಷ್ಯ ಕ್ರಿಯಾಶೀಲನಾಗಿರಲು ದುಡಿಮೆಯಲ್ಲಿ ತೊಡಗಿರಬೇಕು. ಆ ದುಡಿಮೆಯು ಈ ಸಮಾಜದ ನಿರ್ವಹಣೆಯ ದ್ಯೋತಕ. ಆದರೆ, ಪ್ರತಿ ದುಡಿಯುವ ಮನಸ್ಸಿಗೂ ಅದರ ನಿರ್ವಹಣೆ ಮುಖ್ಯ. ದುಡಿಯುವವರು ಸರಿಯಾಗಿ ನಿರ್ವಹಿಸದಿದ್ದರೆ, ಸೋಲು ಹಾಗೂ ನಷ್ಟ ಖಚಿತ. ದುಡಿಮೆಯನ್ನು ಸರಿಯಾಗಿ ನಿರ್ವಹಿಸಲು ಆ ಮನಸ್ಸಿಗೆ 'ತಾಳ್ಮೆ'ಯು ಮುಖ್ಯ. ಈ ದುಡಿಮೆಯ ಸಮನಾಗಿ ತಾಳ್ಮೆಯಿದ್ದಲ್ಲಿ ಉನ್ನತಿಯ ಬದುಕನ್ನು ಅರ್ಥಪೂರ್ಣವಾಗಿ ಸಾಗಿಸಬಹುದು. ಕವಿ, ಇವುಗಳನ್ನು ಬದುಕಿನ ಎರಡು ಗಾಲಿಗಳು ಎಂದಿದ್ದಾರೆ. ಈ ಎರಡರ ಸಮತೆಯಲ್ಲಿ ಸ್ವಲ್ಪ ಏರಿಳಿತವಾದರೂ ಬದುಕು ಕಷ್ಟವಾಗುತ್ತದೆ. ಈ ಕಾರಣದಿಂದಲೇ ಡಿ.ವಿ.ಜಿ ಹೇಳಿದ್ದು 'ಬದುಕು ಜಟಕಾ ಬಂಡಿ' ಎಂದು ಅನಿಸುತ್ತದೆ.

**ಬಿಡುವಿದೆಯೇ**

**ದೇವರೆ ಕೊಂಚ**

**ಮಾತನಾಡಬೇಕಿತ್ತು**

ಜೀವನವು ಅತ್ಯಂತ ವೇಗದ ವ್ಯವಸ್ಥೆಯಲ್ಲಿ ಸಿಲುಕಿದೆ. ಇಲ್ಲಿ ಯಾರಿಗೂ ಬಿಡುವಿಲ್ಲ. ಎಲ್ಲಿ ಶಾಂತಿ, ಸಮಾಧಾನಗಳನ್ನು ಅರಸಿ ಹೋಗುತ್ತಿದ್ದೆವೋ ಅಂತಹ ದೇವಸ್ಥಾನಗಳು ಇಂದು ಕಾಲದ ತುರ್ತುಗೆ ಸಿಲುಕಿವೆ. ಭಕ್ತರು ಕಂಬಿಗಳ ನಡುವೆ ಸಾಲಾಗಿ ನಿಂತು ವ್ಯವಸ್ಥೆ ನೀಡಿದ ಸಮಯದವರೆಗೂ ಬಳಲಿ, ದೇವರ ಹತ್ತಿರ ಬಂದು ತಳ್ಳಿಸಿಕೊಂಡು ತೃಪ್ತರಾಗುವ ಕಾಲದಲ್ಲಿದ್ದೇವೆ. ನಾವು ಈ ದೇವರನ್ನೇ ಕೇಳಬೇಕಿದೆ. ಬಿಡುವಿನ ಸಮಯ ತಿಳಿಸು, ಸ್ವಲ್ಪ ನಿನ್ನ ಬಳಿ ಮಾತನಾಡಬೇಕೆಂದು. ಇದು ಸರಳವಾದ ಚಿಂತನೆ. ಇಲ್ಲಿ ದೇವರೆಂದರೆ ನಮ್ಮ ಮನಸ್ಸು. ನಮ್ಮ ಮನಸ್ಸಿನ ಬಳಿಯೇ ನಾವು ಮಾತನಾಡಲು ಸಮಯ ನೀಡುತ್ತಿಲ್ಲ. ನಮ್ಮ ಸರಿ ತಪ್ಪುಗಳ ಕುರಿತು ಆಲೋಚಿಸದೆ, ಲೋಕದ ವ್ಯವಹಾರಗಳಲ್ಲಿ ಮುಳುಗುತ್ತಿದ್ದೇವೆ. ಆದ್ದರಿಂದಲೇ ಅಪರಾಧಗಳು, ಮಾನಸಿಕ ಕ್ಷೋಭೆಗಳು ಹೆಚ್ಚುತ್ತಿವೆ. ಇಂತಹ ಸಂದರ್ಭದಲ್ಲಿ ನಮ್ಮ ಮನಸ್ಸನ್ನು ದೇವರಂತೆ ಪರಿಭಾವಿಸಿ, ಕೊಂಚ(ಸ್ವಲ್ಪ) ಬಿಡುವು ಮಾಡಿಕೊಂಡು ಅಂತರ್ಮುಖಿಗಳಾಗಬೇಕಾಗುತ್ತದೆ.

**ಮಳೆಗೆ ಇಳೆಯಾಸೆ**

**ಇಳೆಗೆ ಬೆಳೆ**

**ಹೀಗೆ ಸಾರ್ಥಕ**

ಮಳೆಗೆ ಪ್ರಕೃತಿಯ ನಂಟು ಹೇಗೋ, ಭೂಮಿಗೆ ಬೆಳೆಯ ನಂಟು ಕೂಡ ಉಪಯೋಗಿಯೇ ಆಗಿದೆ. ಮಳೆಯಿಂದ ಭೂಮಿ ತಂಪಾಗುತ್ತದೆ. ತಂಪಾದ ಭೂಮಿಯನ್ನು ಹಾಳು ಬಿಡಬಾರದು. ಅತ್ಯುತ್ತಮ ಕೃಷಿ ಮಾಡಬೇಕು. ಇದೆಲ್ಲಾ ಸಾರ್ಥಕ ಕೆಲಸವೆನಿಸುತ್ತದೆ.

**ವಾದ ವಿವಾದಗಳು**

**ಸರಳರೇಖೆಗಳು**

**ಸಂದಿಸವು**

ಬದುಕು ತಿಳಿಯಲೇ ಬೇಕಾದ ಹಾಯ್ಕು ಇದು. ನಮ್ಮ ಮನುಷ್ಯ ಸಂಬಂಧಗಳಲ್ಲಿ ವಾದ ವಿವಾದಗಳೇ ಇಂದು ಅಧಿಕ. ಇಲ್ಲಿ ಬಡತನಕ್ಕಿಂತ, ಶ್ರೀಮಂತಿಕೆಗಿಂತ ಅತಿ ಹೆಚ್ಚು ಸಮಸ್ಯೆಯನ್ನು ಕಾಣುತ್ತಿರುವುದು ಮಾನಸಿಕ ಸಮಸ್ಯೆಗಳೇ ಆಗಿವೆ. ನಮ್ಮ ಸಮಾಜಕ್ಕೆ ಮನೋವೈದ್ಯರ ಅಗತ್ಯವೂ ಇದೆ. ಈ ನಮ್ಮ ವಾದಗಳು ಹೇಗೆ ಸಾಗುತ್ತವೆಯೆಂದರೆ ಸರಳ ರೇಖೆಯಂತೆ, ರಾಜಿಯಾಗುವುದೇ ಇಲ್ಲ. ಸರಿಯಾಗಲಿ, ತಪ್ಪಾಗಲಿ ನಾವೇ ಗೆಲ್ಲಬೇಕೆಂಬ ಕೆಟ್ಟ ಹಠ. ನಮ್ಮ ದಾರಿಯೇ ಸರಿ ಇದೆ ಎಂದು ವಾದಿಸುತ್ತೇವೆ. ಈ ಸರಳ ರೇಖೆಯನ್ನು ತ್ಯಜಿಸಿ, ಬಹುಮುಖಿ ನೆಲೆಯಲ್ಲಿ ಆಲೋಚಿಸಿದರೆ ನಮ್ಮ ತಪ್ಪುಗಳೂ ತಿಳಿಯುತ್ತವೆ. ನಮಗಿಂತಲೂ ವಿಭಿನ್ನ ಜ್ಞಾನದ ಪರಿಧಿಯು ಕಾಣುತ್ತದೆ. ಎಂದು ಈ ಏಕಮುಖಿ ಚಿಂತನೆಯ ಸರಳ ರೇಖೆಯು, ತನ್ನ ಪಥ ಬಿಟ್ಟು ತನ್ನ ತಪ್ಪುಗಳ ಅರಿಯಲು ಎಂದು ಸಂಧಿಸುತ್ತದೆಯೋ ಅಂದು ವಾದ ವಿವಾದಗಳು ನಿಂತು ಪರಸ್ಪರ ಮಧುರ ಬದುಕಿನ ಮೂಲಕ ನೆಮ್ಮದಿಯಾಗಿ ಬದುಕುವುದನ್ನು ಕಲಿಯಬಹುದು.

**ಆತ್ಮನಿರೀಕ್ಷಣೆಯು**

**ನಮ್ಮೊಳಗಣ**

**ನಿಜ ಬೆಳಕು**

ಆತ್ಮದ ಬೆಳಕಿಗಾಗಿ ಸದಾ ಹಂಬಲಿಸುತ್ತೇವೆ. ಅದುವೆ ತೃಪ್ತಿ, ಮೋಕ್ಷ. ಈ ಬೆಳಕಿಗಾಗಿ ಪರಿತಪಿಸುವ ಎಲ್ಲಾ ಯೋಗ ಸಾಧನೆಗಳು ಹೊರ ಪ್ರಕೃತಿಯ ಹುಡುಕಾಟದಲ್ಲಿ ಸೋಲು ಅಂತರೀಕ್ಷಣೆ ಹೆಜ್ಜೆ ಇರಿಸಿರುತ್ತವೆ. ನಮ್ಮನ್ನು ನಾವು ಅರಿತಾಗ ಮಾತ್ರ ನಮ್ಮ ಜ್ಞಾನದ ಬೆಳಕು ಪ್ರತಿಫಲಿಸುತ್ತದೆ. ಅದುವೆ ಪರಿಪೂರ್ಣತೆ.

**ಲೆಕ್ಕಚಾರದಿ**

**ದೊರಕುವುದೆ ಒಲವ**

**ಸಾಕ್ಷಾತ್ಕಾರ !**

ಒಲವೆಂಬ ಹೊತ್ತಿಗೆಯ ಓದ ಬಯಸುತ ನೀನು ಬೆಲೆ ಎಷ್ಟು ಎಂದು ಕೇಳುತಿಹೆ ಹುಚ್ಚ, ಹಗಲಿರುಳು ದುಡಿದರೂ ಹಲ ಜನುಮ ಕಳೆದರೂ ತೆತ್ತಲಾರೆ ನೀ ಬರಿ ಅಂಚೆ ವೆಚ್ಚ ಎಂದು ಒಲವಿನ ಕವಿ ಅಂಬಿಕಾತನಯದತ್ತ ನುಡಿದಿದ್ದಾರೆ. ಒಲವು ಗಣಿತವಲ್ಲ, ಅದೊಂದು ಭಾವಕೋಶ. ಲೆಕ್ಕಚಾರದಿಂದ ಅದನ್ನು ಪಡೆಯಲು ಸಾಧ್ಯವಿಲ್ಲ. ಲೆಕ್ಕದಲ್ಲಿ ಗುಣಿಸಿದವರೆಲ್ಲಾ ನ್ಯಾಯಾಲಯಗಳಲ್ಲಿ ಅಲೆಯುತ್ತಿದ್ದಾರೆ. ಮನೆಯಲ್ಲಿ ವಾದ ವಿವಾದಗಳಲ್ಲಿ ಮುಳುಗಿ ಒಲವಿಗೆ ವಿಮುಖವಾಗಿದ್ದಾರೆ.

ಒಲವೆಂದರೆ, ಆತ್ಮಾನುಸಂಧಾನ. ಪರಸ್ಪರ ಪ್ರೇಮದಿಂದ ಎಲ್ಲವನ್ನೂ ಸುಖಿಸುವ ಅಮರ ನೌಕೆ. ಇಷ್ಟಗಳ ಸ್ವೀಕರಿಸಿದಂತೆ, ಕಷ್ಟಗಳನ್ನು ಅನುಭವಿಸುವ ಜವಾಬ್ದಾರಿ. ಕವಿಯ ಈ ಪ್ರಶ್ನೆಯು ವರ್ತಮಾನಕ್ಕೆ ಸೂಕ್ತವಾದ ಚಿಂತನೆಯಾಗಿದೆ.

**ಸಕಲ ಗುಣಗಳ**

**ತಾಯಿ**

**ಕೃತಜ್ಞತೆಯ ನಡತೆ**

ಕೃತಜ್ಞತೆ ಇಲ್ಲದ ಬದುಕು ಯಾವ ಗುಣಗಳಿದ್ದರೂ ವ್ಯರ್ಥ. ಹಣ, ಅಧಿಕಾರ ಏನಿದ್ದರೂ ಸರಿಯಾದ ಗುಣವಿಲ್ಲದಿದ್ದರೆ ಅದು ಬಾಳ್ವೆಯಲ್ಲ. ಸರಿಯಾದ ನಡತೆಯು ಸಹಾಯ ಪಡೆದ ಇನ್ನೊಬ್ಬರಿಗೆ ತೋರುವ ಗುಣದ ಮೇಲೆ ನಿಂತಿರುತ್ತದೆ. ಆದ್ದರಿಂದಲೇ ಕೃತಜ್ಞತೆಯ ನಡತೆಯನ್ನು ಕವಿಯು ಎಲ್ಲಾ ಗುಣಗಳ ತಾಯಿ ಎಂದಿದ್ದಾರೆ.

**ಮಾತಿನ ಉತ್ತರ**

**ಕಲಹ ಜನಕ**

**ಮೌನವೇ ಶ್ರೇಷ್ಠ**

"ಮಾತು ಬರುವುದು ಎಂದು ಮಾತಾಡುವುದು ಬೇಡ, ಒಂದು ಮಾತಿಗೆ ಎರಡು ಅರ್ಥವುಂಟು. ಎದುರಿಗಿರುವವ ಕೂಡ ಮಾತ ಬಲ್ಲ ಬಲ್ಲವ ಗೆಳೆಯ, ಬರಿದೆ ಆಡುವ ಮಾತಿಗರ್ಥವಿಲ್ಲ" ವೆಂದು ಪ್ರೇಮಕವಿ ಕೆ.ಎಸ್. ನರಸಿಂಹಸ್ವಾಮಿ ಕಿವಿಮಾತು ನುಡಿದಿದ್ದಾರೆ. ಮಾತಿಗೆ ಮಾತುಗಳು ಸೇರಿ ಜಗಳವಾಗುತ್ತವೆ ಹೊರೆತು, ಪರಿಹಾರ ಸಿಗುವುದಿಲ್ಲ. ಮಾತುಗಳು ಹೆಚ್ಚಿದರೆ, ಅಲ್ಲಿ ಮೌನವೇ ಭೂಷಣ ಎನಿಸಿಕೊಳ್ಳುತ್ತದೆ.

ನೂರು ಮಾತಿಗಿಂತ ಒಂದು ಮೌನವು ನಡೆಯುವ ಎಲ್ಲಾ ಅನಾಹುತಗಳನ್ನು ತಪ್ಪಿಸುತ್ತದೆ.

**ಹಕ್ಕಿ ಉದುರಿಸಿದ**
**ಬೀಜವೀಗ**
**ಹೆಮ್ಮರದಿ ಹಣ್ಣು**

ಪ್ರತಿಯೊಂದು ಕಾಡು ಮರಗಳಿಗೂ ಇಂತಹದ್ದೇ ಇತಿಹಾಸವಿರುತ್ತದೆ. ಹಕ್ಕಿಯು ಹಣ್ಣನ್ನು ತಿನ್ನುವ ಆಸೆಯಲ್ಲಿ ಹೊತ್ತೊಯ್ಯುತ್ತದೆ. ಯಾವುದೋ ಮರದಲ್ಲಿ ಕುಳಿತು ತಿನ್ನುತ್ತಾ ಉದುರಿಸಿದ(ಬೀಳಿಸಿದ) ಬೀಜವು ನೆಲಕ್ಕೆ ಬೀಳುತ್ತದೆ. ಮಣ್ಣಿಗೆ ಬಿದ್ದ ಬೀಜ ಮೊಳಕೆಯೊಡೆದು ಗಿಡವಾಗಿ, ಮರವಾಗಿ, ಹಿರಿದಾದ ಮರವಾಗಿ ಸಾವಿರಾರು ಹಣ್ಣು ನೀಡುತ್ತದೆ. ಇಂತಹ ಪ್ರತಿ ಹಣ್ಣು ಕೂಡ ಎಂದೋ ಯಾವುದೋ ಪಕ್ಷಿ ಚೆಲ್ಲಿದ ಬೀಜವಾಗಿರುತ್ತದೆ. ಇದು ಪ್ರಕೃತಿಯ ಚಲನಶೀಲತೆ. ಇದನ್ನು 'ಕಾರ್ಯ ಕಾರಣ ಸಂಬಂಧ' ಎಂದು ಕರೆಯುತ್ತೇವೆ.

ಎಂದೋ, ಯಾರೋ ನೀಡಿದ ಜೀವಧಾತುವಿನಂತಹ ಜ್ಞಾನ, ಆಶ್ರಯವು ಮುಂದೊಂದು ದಿನ ದೊಡ್ಡ ದೊಡ್ಡ ಅಧಿಕಾರಿಗಳನ್ನು, ಸೇವಕರನ್ನು ಮುಖ್ಯವಾಗಿ ಮನುಷ್ಯರನ್ನಾಗಿಸುವ ಶಕ್ತಿ ನೀಡುತ್ತದೆ.

**ಸಂಬಂಧಗಳ**
**ಸಾವು ನಿಜದಿ**
**ಮಹಾ ಘೋರ ನರಕ**

ಸಂಬಂಧಗಳಲ್ಲಿ ಹಲವು ವಿಧಗಳಿವೆ. ಎಲ್ಲಾ ಸಂಬಂಧಗಳಲ್ಲೂ ಈ ಕಳಚುವಿಕೆಯು ಹೆಚ್ಚು ನೋವು ನೀಡುತ್ತದೆ. ಅದು ಭವಿಷ್ಯಕ್ಕೂ ನರಕವಾಗಿ ವ್ಯಾಪಿಸಲೂಬಹುದು. ಕೆಲವು ಅಗಲುವಿಕೆಯು ಅಷ್ಟೇನು ಪರಿಣಾಮ ಬೀರುವುದಿಲ್ಲ. ಕೆಲವು ಸಂಬಂಧಗಳು ದೀರ್ಘ ಗುರುತುಗಳನ್ನು ದಾಖಲಿಸಿರುತ್ತವೆ. ಅವುಗಳ ಕಷ್ಟ ಅನುಭವಿಸುವವರಷ್ಟೇ ವ್ಯಾಖ್ಯಾನಿಸಬಲ್ಲರು. ರಕ್ತ ಸಂಬಂಧಗಳು ಈ ಪರಿಧಿಯಲ್ಲಿ ಮೊದಲಿಗೆ ದಾಖಲಾಗುತ್ತವೆ. ತಂದೆ, ತಾಯಿ, ಗಂಡ, ಮಕ್ಕಳು ಇವೆಲ್ಲಾ ಉಸಿರಿನೊಂದಿಗೆ ಬೆರೆತ ನಂಟುಗಳು. ಕಳಚಿದರೂ ಬಾಳ್ವೆ ಮಾಡಬಹುದು. ಆದರೆ, ಅವುಗಳೊಂದಿಗೆ ಹೊಂದಿದ್ದ ಸಂಬಂಧದ ಗುರುತುಗಳು ಬದುಕಿರುವ ತನಕ ನರಕವಾಗುವಂತೆ ಕಾಡುತ್ತವೆ. ಇಲ್ಲಿ ಒಳ್ಳೆಯ ನಂಟಾಗಿಯೂ, ಕೆಡುಕಿನ ನಂಟಾಗಿಯೂ ಬಾಧಿಸಬಹುದು. ಮಮತೆ, ಪ್ರೀತಿ, ಪ್ರೇಮ, ವಾತ್ಸಲ್ಯಗಳು ಒಳ್ಳೆಯ ನಂಟಾದರೆ, ಸಾಲ, ಹಣದ ವ್ಯವಹಾರ, ಆಸ್ತಿಯ ವ್ಯವಹಾರದಂತಹ ಸಂಪತ್ತುಗಳು, ಗಂಡು–ಹೆಣ್ಣಿನ ಸಂಬಂಧಗಳು ಹೀಗೆ ಇವು ಸಮಸ್ಯೆಗಳಾಗಿಯೂ

ಬದುಕಿನುದ್ದಕ್ಕೂ ಮಹಾ ಘೋರನರಕವಾಗಿ ಕಾಡುತ್ತವೆ.

ಬೇಂದ್ರೆ ಅವರು ಹೇಳುವಂತೆ 'ನೆನಪಿಗೆ ಮರಣವಿಲ್ಲ' ಎಂಬಂತೆ ಮತ್ತೆ ಮತ್ತೆ ನೆನಪಾಗುತ್ತವೆ. ಇವುಗಳಿಗೂ ಮನೋವಿಜ್ಞಾನದಲ್ಲಿ ಪರಿಹಾರವಿದೆ. ಸಂಪತ್ತುಗಳಿಗೆ ಪರಿಹಾರ ನೀಡಲಾಗದಿದ್ದರೂ ಭಾವನೆಗಳಿಗೆ ಪರಿಹಾರ ನೀಡಬಹುದು. ಭಾವನೆಗಳನ್ನು ಪ್ರಕೃತಿಯಂತೆ ಹೊಸ ಚೈತನ್ಯ ತುಂಬಿಕೊಳ್ಳುವ ಮೂಲಕ ಬದುಕಿನ ಸತ್ಯವನ್ನು ಅರಿಯಬೇಕು. ನರಕವನ್ನು ಇರುವ ತನಕ ಸ್ವರ್ಗವಾಗಿ ಪರಿವರ್ತಿಸಿಕೊಳ್ಳಬಹುದು. ಆದರೆ, ಆ ಪರಿವರ್ತನೆಯು ನಮ್ಮ ಮನಸ್ಸಿಗೆ ಮೊದಲು ನ್ಯಾಯಬದ್ಧವಾಗಿರಬೇಕು. ಎರಡನೇ ಮದುವೆ, ಹೊಸ ಸ್ನೇಹ, ಮಧುರ ಬಾಂಧವ್ಯ, ಇರುವವರೊಂದಿಗೆ ಹೊಂದಿಕೊಳ್ಳುವ ವಾತ್ಸಲ್ಯ ಹೀಗೆ ಅರ್ಥಪೂರ್ಣ ಬದಲಾವಣೆಗಳು ಬದುಕನ್ನು ಹಸನುಗೊಳಿಸುತ್ತವೆ.

**ಸತ್ಯದ ದಾರಿ**

**ಎಂಬುದು ಒಂಟಿ**

**ನಡಿಗೆಯ ಪಯಣ**

ಸತ್ಯಕ್ಕೆ ಯಾವಾಗಲೂ ಸಾಕ್ಷಿಗಳಿರುವುದಿಲ್ಲ. ಅದಕ್ಕೆ ನಿಜವಾದ ವಾರುಸುದಾರರೆಂದರೆ, ನಾವೇ ಆಗಿರುತ್ತೇವೆ. ಸುಳ್ಳಿಗೆ ಸಾಕ್ಷಿಗಳು ಹೆಚ್ಚಿದಷ್ಟೂ ಹೆಚ್ಚು ದಿನ ಬದುಕುತ್ತದೆ. ಅಂತಿಮವಾಗಿ ಬೆತ್ತಲಾಗುವ ಘೋರ ಕಾಠಿಣ್ಯವು ಬಹು ಕಷ್ಟ. ಸತ್ಯವು ಆರಂಭದಿಂದ ಏಕಾಂಗಿಯಾಗಿ, ಕಷ್ಟದ ಹಾದಿಯಲ್ಲೇ ಸಾಗಿದರೂ ಅಂತಿಮ ಫಲಿತಾಂಶ ಮಾತ್ರ ನೆಮ್ಮದಿಯುತವಾಗಿರುತ್ತದೆ. ಒಂಟಿಯಾದರೂ ಭವಿಷ್ಯವನ್ನು ಕಾಪಾಡುವ ಪಯಣ ಅತ್ಯುತ್ತಮವಾದುದು.

**ತುಟಿ ಬಿರಿದ ಹೂ**

**ದುಂಬಿಯ ಸಿಹಿ**

**ಮುತ್ತಿಗೆ ಸೋತಿತು**

ಇದೊಂದು ಭಾವನಾತ್ಮಕ ಹಾಯ್ಕು. ಅರಳಿದ ಹೂವಿಗೆ ಮಧು ಹೀರಲು ದುಂಬಿ ಬರುತ್ತದೆ. ದುಂಬಿಯು ಸಿಹಿಯನ್ನು ಹೀರುವ ಜೊತೆಗೆ ಹೂವಿನ ಪರಾಗಸ್ಪರ್ಶಕ್ಕೆ ಸಹಾಯಕವಾಗುತ್ತದೆ. ಮನುಷ್ಯನೂ ಹಾಗೇ ಅಲ್ಲವೇ! ಯೌವನದಲ್ಲಿ ಮಾತ್ರ ನಿಜವಾದ ಪ್ರೇಮವನ್ನು ಸವಿಯಲು ಸಾಧ್ಯ.

**ಬದುಕ ತಿಮಿರವ**

**ಕಳೆವುದು**

**ನಗೆಯ ಬೆಳಕು**

'ನಗುವು ಸಹಜದ ಧರ್ಮ, ನಗಿಸುವುದು ಪರಧರ್ಮ'ವೆಂದು ಡಿ.ವಿ.ಜಿ ನುಡಿದಿದ್ದಾರೆ. ಭುವನೇಶ್ವರಿ ಹೆಗಡೆ ಹಾಗೂ ಪ್ರಹ್ಲಾದ್ ಬಸಪ್ಪ ರ್‍ಯಾವಣಕಿ ಅವರು 'ನಕ್ಕು ಹಗುರಾಗಿ' ಎಂಬ ಪುಸ್ತಕಗಳನ್ನು ಬರೆದಿದ್ದಾರೆ. ಇವೆಲ್ಲವೂ ನಗುವು ನಮ್ಮ ಕಷ್ಟಗಳನ್ನು ನಿವಾರಿಸಿಕೊಳ್ಳಲು ಇರುವ ನಮ್ಮೊಳಗಿನ ಮದ್ದು ಎಂಬುದನ್ನು ಸೂಚಿಸುತ್ತವೆ.

ನಮಲ್ಲಿ ನಗೆಯ ಬೆಳಕು ಮೂಡಲು ಬದುಕಿನ ಕತ್ತಲೆ ಇಲ್ಲವಾಗಬೇಕು ಆ ಕಾರಣಕ್ಕಾಗಿ ನಾವು ನಮ್ಮ ಮನಸ್ಸನ್ನು ಆನಂದವಾಗಿಡಲು ನಮ್ಮೊಳಗೆ ಇರುವ ಪ್ರಯತ್ನಗಳನ್ನು ನಾವು ಮಾಡಲೇಬೇಕಿದೆ. ಮಗುವಿನಿಂದ ಮುದುಕರವರೆಗೂ ಸದಾ ಹಂಬಲಿಸುವ ಏಕೈಕ ಮಾತ್ರೆಯೆಂದರೆ ಅದು ನಗು. ಯಾವುದೇ ರೂಪದಲ್ಲಿ ಬಂದರೂ ಸ್ವೀಕರಿಸುವ ಗುಣವೇ ಎಲ್ಲರ ಆಕಾಂಕ್ಷೆ.

**ನೆಲದ ಕರುಣೆಗೆ**

**ನಿಂತವು ಹೂ**

**ಗಿಡ ಮರ ಬಳ್ಳಿ**

ಈ ಪ್ರಕೃತಿಯು ಗಿಡ, ಮರ, ಬಳ್ಳಿಗಳಿಂದ ಸದಾ ಶೋಭಿಸುತ್ತದೆ. ನೆಲದ ಕರುಣೆಯು ನಿಂತಿರುವುದು ಅದರ ಜೀವಾಮೃತ ಕಾರ್ಯಗಳಿಂದ ಎನ್ನಬಹುದು. ಮಳೆ ಬಂದರೆ ನೆಲ ತಂಪಾಗಿ, ಹಸಿರು ಹೊದಿಯುತ್ತದೆ. ಅದೇ ನೆಲದ ಸತ್ವ ಹೀರಿ ಗಿಡ ಮರ ಬಳ್ಳಿಗಳು ಸೃಷ್ಟಿಯಾಗಿ ನೆಲದ ಸೊಬಗನ್ನು ಹೆಚ್ಚಿಸುವ ಮೂಲಕ ಸಾವಿರಾರು ಜೀವರಾಶಿಗಳಿಗೆ ಅಮೃತದಂತಹ ಜೀವಶಕ್ತಿಯನ್ನು ಒದಗಿಸಲು ಕಾರಣವಾಗುತ್ತವೆ. ಭೂಮಿ ಯಾವಾಗಲೂ ಪೊರೆಯುವ ತಾಯಿ.

**ಎದೆಗೆ ಬರೆದ**

**ರಂಗವಲ್ಲಿಯ**

**ಗಾಳಿ ಅಳಿಸದು**

'ಎದೆಯ ದನಿಗೂ ಮಿಗಿಲಾದ ಶಾಸ್ತ್ರವಿಹುದೇನು!' ಕುವೆಂಪು ಹೇಳಿದ ಈ ಸಾಲಿನಲ್ಲಿ ಅನಂತ ಹಾಗೂ ಸತ್ಯದ ಗುರುತುಗಳಿವೆ. ಇಂತಹ ಎದೆಯಲ್ಲಿ ಮೂಡಿದ ಭಾವನೆಗಳನ್ನು ನೆಲದಲ್ಲಿ ಬರೆದ ರಂಗೋಲಿಯು

ಗಾಳಿಗೆ ಅಳಿಸಿಹೋದಷ್ಟು ಸುಲಭವಾಗಿ ಅಳಿಸಲಾಗದು. ಅದು ಭಾವನೆಗಳ ಕೂಟ. ಅದಕ್ಕೆ ನೆನಪುಗಳು ಅಧಿಕ. ಆ ನೆನಪುಗಳಲ್ಲಿ ಜೀವವು ಕಾರುಣ್ಯಹೊಂದಿರುತ್ತದೆ.

**ಖಡ್ಗಕ್ಕಿಂತ ಹರಿತ**
**ನಿಜ, ಲೇಖನಿಯೂ**
**ಕೊಲ್ಲುತ್ತದೆ**

ನಮ್ಮ ಹೋರಾಟಗಳು ಖಡ್ಗಗಳನ್ನು ಮಾತ್ರ ಪ್ರಯೋಗಿಸಿ ನಡೆದಿಲ್ಲ. ಮೊನಚಾದ ಅಕ್ಷರಗಳ ಮೂಲಕವೂ ಮೆದುಳಿನ ಕತ್ತಲೆ ಕಳೆದು ಜನರನ್ನು ಎಚ್ಚರಗೊಳಿಸಲಾಗಿದೆ. ನಮ್ಮ ಇತಿಹಾಸದಲ್ಲಿ ಲೇಖನಿಯ ವಿನ್ಯಾಸಗಳಾದ ಪುಸ್ತಕಗಳು, ಪತ್ರಗಳು ಮಾಡಿದಷ್ಟು ಕ್ರಾಂತಿಯು ಈ ಖಡ್ಗಗಳಿಂದ ನಡೆದಿಲ್ಲ. ಅಕ್ಷರದಲ್ಲಿ ಜ್ಞಾನವಿದೆ, ನಿಜವಾದ ಎಚ್ಚರವಿದೆ. ಬಳಸುವಾಗ ಸರಿಯಾಗಿ ಬಳಸುತ್ತಾ ಅವುಗಳ ಉಪಯೋಗ ಪಡೆಯಬೇಕಷ್ಟೆ.

**ದುರಿತ ಕಾಲ**
**ಜಡ ಮನಸ್ಸಿಗೆ**
**ಈ ಬದುಕಿಗಲ್ಲ**

ಕೆಟ್ಟ ಕಾಲವು ನಮ್ಮ ಜಡವಾದ ಮನಸ್ಸಿಗೆ ಹೊರೆತು ಈ ಬದುಕಿಗೆ ಇರುವುದಿಲ್ಲ. ನಾವು ಸಾಕಷ್ಟು ಸಲ ಕ್ಷಣದ ಸಮಸ್ಯೆಗಳನ್ನೇ ಭವಿಷ್ಯದ ಸಮಸ್ಯೆಯಾಗಿ ಆಲೋಚಿಸುತ್ತೇವೆ. ದುಃಖಿಸುತ್ತೇವೆ. ನಿಂದಿಸಿಕೊಳ್ಳುತ್ತೇವೆ. ಅಪಾಯಕ್ಕೂ ಒಳಗಾಗುತ್ತೇವೆ. ನಮ್ಮ ಅಥವಾ ಇನ್ಯಾವುದೋ ಸಮಸ್ಯೆಯಿಂದ ಈ ಸಮಸ್ಯೆಗಳು ಉಂಟಾಗುತ್ತವೆ. ಆ ಸಮಯದಲ್ಲಿ ಅತ್ಯಂತ ಧೈರ್ಯವಾಗಿ ಎಚ್ಚರಗೊಂಡರೆ ಉಳಿದ ನಾಳೆಗಳ ಬದುಕು ಅರ್ಥಪೂರ್ಣವಾಗಿರುತ್ತದೆ.

**ಸದಾ ಕಾಯುವ**
**ಕಣ್ಣುಗಳು**
**ನಮ್ಮೆಲ್ಲರ ಪರಂ 'ಪೊರೆ'**

ನೋಟವು ಎಲ್ಲವನ್ನೂ ದಾಖಲಿಸುತ್ತದೆ. ಎಲ್ಲವೂ ಸರಿಯಾಗಿ ದಾಖಲಾಗಲು ಕಣ್ಣು ಆರೋಗ್ಯವಾಗಿರಬೇಕಷ್ಟೆ. ಆರೋಗ್ಯವಿಲ್ಲದೆ ಕಣ್ಣುಗಳು ಪೊರೆಮುಚ್ಚಿ ಸುಳ್ಳುಗಳನ್ನೂ ದಾಖಲಿಸಬಹುದು. ಆದ್ದರಿಂದ ನಮ್ಮ ಕಣ್ಣುಗಳು ನಿಜವಾಗಿಯೂ ಪರಂಪರೆಯನ್ನು ಉಳಿಸುವ ವಿಚಾರ ಬಿಂಬಗಳು.

ಸದಾ ನಮ್ಮನ್ನು ಜಗತ್ತಿಗೆ ಪರಿಚಯಿಸುವ, ಜಗತ್ತನ್ನು ನಾವು ಶುದ್ಧವಾಗಿ ತಿಳಿಯುವ ಏಕೈಕ

ಸಾಧನವೆಂದರೆ ಈ ಕಣ್ಣುಗಳು. ಅವುಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ ನಮ್ಮದೇ ಆಗಿರುತ್ತದೆ.

**ಕೂಡಿಸಿ ಹೊಲೆಯುವಂತೆ**
**ಚುಚ್ಚಿ ನೋಯಿಸುವುದು**
**ಸೂಜಿ**

ಆರಿಫ್ ರಾಜಾ ಅವರ 'ಹೊಲಿಗೆ ಯಂತ್ರದ ಅಮ್ಮಿ' ಎಲ್ಲರಿಗೂ ತಿಳಿದ ಕವಿತೆ. "ತುಂಡು ತುಂಡು ಸೇರಿಸಿ ಹೊಲಿದು ಒಂದುಮಾಡುವ ಸೂಜಿಯು, ಲೋಕದ ಮಾನ ಕಾಪಾಡುತ್ತದೆ." ಆದರೆ, ಇಲ್ಲಿನ ಕವಿತೆಯು ಕೂಡಿಸುವಂತೆಯೇ, ಚುಚ್ಚಿ ನೋಯಿಸುವ ಇನ್ನೊಂದು ಗುಣವನ್ನೂ ತಿಳಿಸುತ್ತದೆ. ಕಾಣದಂತೆ ನೋಯಿಸುವ ಗುಣವನ್ನು 'ಸೂಜಿ ತರ ಚುಚ್ಚಿ ಚುಚ್ಚಿ ನೋಯಿಸಬೇಡ' ಎನ್ನುವರು. ಆಸ್ಪತ್ರೆಯಲ್ಲಿ ರಕ್ತ ಪರೀಕ್ಷೆ ಮಾಡುವಾಗ, ಮದ್ದು ನೀಡುವಾಗ ಚುಚ್ಚುವ ಕ್ಷಣ ಪರಿಯನ್ನು ನೋವಿಗೆ ಸಂಕೇತಮಾಡಿದ್ದಾರೆ. ಮನಸ್ಸು ಸೂಜಿಯಂತೆ ಬಹಳ ಸೂಕ್ಷ್ಮ. ಇದಕ್ಕೆ ಕೂಡಿಸುವ ಹಾಗೂ ನೋಯಿಸುವ ಎರಡೂ ಗುಣಗಳಿರುತ್ತವೆ. ಆದರೆ, ಬಳಸುವ ವಿಧಾನ ನಮಗೆ ಸರಿಯಾಗಿ ತಿಳಿಯಬೇಕಷ್ಟೆ. ಕೂಡಿಸುವುದರಿಂದ ಸಂಬಂಧ ಬೆಳೆಯುತ್ತದೆ. ನೋಯಿಸುವುದರಿಂದ ಸಂಬಂಧ ಅಳಿಯುತ್ತದೆ. ಮನುಷ್ಯ ಪ್ರಾಣಿಯ ಮನೋ ತತ್ವಕ್ಕೆ ಇದೊಂದು ಅತ್ಯುತ್ತಮ ಕಿವಿಮಾತಾಗಿದೆ.

ಚಿಕ್ಕವರಾಗಿದ್ದಾಗ ಸೂಜಿಗೆ ದಾರ ಸೇರಿಸಲು ಪಡುತ್ತಿದ್ದ ಶ್ರಮ ಸಾಮಾನ್ಯವಾದುದೇ.. ಮನಸ್ಸು ಹೀಗೆಯೇ ಕಷ್ಟ–ಇಷ್ಟಪಟ್ಟು ಪೋಣಿಸುವ ದಾರ ಸದಾ ಬೆಸುಗೆಯಾಗುತ್ತದೆ.

**ಬೆಣ್ಣೆ ತುಪ್ಪಗಳೆರಡು**
**ಹಾಲು ಪಡೆದ**
**ಸಂಸ್ಕಾರದ ಫಲ**

ಯಾವುದೇ ಪ್ರಕ್ರಿಯೆಯು ಸಂಸ್ಕಾರಗೊಳ್ಳುತ್ತಾ ಸಾಗಿದಷ್ಟೂ ಅದರ ಕಾರ್ಯಗಳು ಬಹುಪಯೋಗಿ ಕಾಣ್ಕೆಗಳಾಗಬೇಕು. ಇಲ್ಲಿ ಕವಿಯು ಮನುಷ್ಯನ ವ್ಯಕ್ತಿತ್ವವು ವಿಕಾಸ ಹೊಂದಿದಷ್ಟೂ ಸಮಾಜದಲ್ಲಿ ಪಡೆಯುವ ಯಶಸ್ಸಿನ ಫಲಗಳನ್ನು ಹಾಲಿನ ಸಂಸ್ಕಾರದ ಮೂಲಕ ತಿಳಿಸಿದ್ದಾರೆ. ಹಾಲು ಸಂಸ್ಕಾರ ಪಡೆದಷ್ಟೂ ಮೊಸರಾಗುತ್ತದೆ. ಮೊಸರನ್ನು ಸಂಸ್ಕರಿಸಿದರೆ, ಬೆಣ್ಣೆ ಬರುತ್ತದೆ. ಆ ಬೆಣ್ಣೆಯನ್ನು ವ್ಯವಸ್ಥಿತವಾಗಿ ಕಾಯಿಸಿ ರೂಪ ನೀಡಿದರೆ ತುಪ್ಪವಾಗುತ್ತದೆ. ಸಂಸ್ಕಾರವೆಂಬುದು ಬದುಕುವ ರೀತಿ ನೀತಿಯೇ ಹೊರೆತು ಯಾವುದೇ ಕೊಡುಗೆಯ ಫಲವಲ್ಲ.

**ಕಸುಗಾಯಿ**

**ಮಾಗಿ ಹುಳಿ ನೀಗಿ**

**ಸಿಹಿಯಾಗುವ ಪರಿ**

ಒಂದು ಪಕ್ವತೆಯ ವ್ಯಕ್ತಿತ್ವ ರೂಪುಗೊಳ್ಳಲು ತನ್ನೊಳಗಿನ ಅಹಿತಗಳನ್ನು ಕಳಚಿ ಹಿತವಾದ ಸ್ವೀಕಾರಕ್ಕೆ ಹಲವು ಪ್ರಯತ್ನಗಳನ್ನು ಮಾಡಬೇಕು. ಇನ್ನೂ ಪಕ್ವತೆಯನ್ನು ಪಡೆಯದ ಕಾಯಿಯು ಕಸುಗಾಯಿಯಂತೆ. ಅದು ಗಾಳಿ, ಮಳೆಗಳೆಂಬ ಪ್ರಕೃತಿಯ ವಿಕೋಪಗಳನ್ನು ದಾಟಿ, ಬಲವಾಗಿ ಉಳಿಯಬೇಕು. ನೆಲದ ಪೋಷಕಾಂಶಗಳಿಂದ ಮಾಗಿ, ತನ್ನ ಹುಳಿತನವನ್ನು ಕಳೆದು ಸಿಹಿಯ ಪಡೆಯುತ್ತದೆ. ಮನುಷ್ಯ ವ್ಯಕ್ತಿತ್ವಗಳೂ ಹೀಗೆಯೇ.. ಅಜ್ಞಾನಗಳ ಕಳಚಿ, ಉಳಿದು ಬಲಿಷ್ಠರಾಗುವ ಪರಿಯನ್ನು ಇಲ್ಲಿ ವರ್ಣಿಸಲಾಗಿದೆ.

ಸರ್ವಜ್ಞ ಕವಿಯು ಬರೆದಿದ್ದಾನೆ ಎನ್ನಲಾಗುವ ತ್ರಿಪದಿಯಲ್ಲಿ ಕಸುಗಾಯಿ ಪದವನ್ನು ವಿಭಿನ್ನವಾಗಿ ಬಳಸಿರುವುದೇ ಪ್ರತ್ಯೇಕ ಅಧ್ಯಯನವಾಗುತ್ತದೆ.

**ಕಾಡೆಲ್ಲಾ ಕಸುಗಾಯಿ, ನಾವೆಲ್ಲ ಹೆಗ್ಗಿಡವು**
**ಆಡಿದ ಮಾತು ನಿಜವಿಲ್ಲ ಮಲೆನಾಡು ಕಾಡು**
**ಸಾಕೆಂದ ಸರ್ವಜ್ಞ**

**ನಿಲಯದಿಂದ**

**ಬಯಲಿಗೆ ಸಾಗಿ**

**ಮಾಗಲಿ ಈ ಜೀವ**

ನಾವೆಲ್ಲಾ ಲೌಕಿಕ ಜೀವಿಗಳು. ಅತಿ ಚಿಕ್ಕ ಆಲೋಚನೆಯಲ್ಲಿಯೇ ಬದುಕನ್ನು ವ್ಯರ್ಥಾ ಮಾಡಿಕೊಳ್ಳುತ್ತೇವೆ. ಮನೆ, ಹೆಂಡತಿ, ಮಕ್ಕಳು ಇಷ್ಟೇ ಬದುಕೆಂದು ಪುರುಷನು, ಮಹಿಳೆಯು ಹೋರಾಡುತ್ತಾರೆ. ಇದೆಲ್ಲಾ ನಿಲಯದ ಬದುಕು. ಈ ಬದುಕು ಸುಖ–ದುಃಖಗಳ ಮಿಶ್ರಣವೆಂದು ಭಾವಿಸಿ, ಅಷ್ಟೇ ನಮ್ಮ ಬಾಳ್ವೆಯೆಂದು ತೊಳಲುವ ಜೀವವಿದು. ಆದರೆ, ಇದೆಲ್ಲವನ್ನೂ ದಾಟುವ, ಬದುಕು ಇವೆಲ್ಲವನ್ನೂ ಮೀರುವ ಇನ್ನೂ ಸಾಧನೆಗಳಿವೆ. ಇವೆಲ್ಲಾ ತುಂಬಾ ಕ್ಷಣಾರ್ಧಸುಖಗಳೆಂದು ಭಾವಿಸಬೇಕಿದೆ. ಇದು ಬಯಲಿನ ಪರಿಯಾಗಿದೆ. ಆ ಬಯಲ ಗೆಲ್ಲುವ ಪ್ರತಿ ಜೀವವೂ ಮಾಗುವ ಮೂಲಕ ದೈವತ್ವಕ್ಕೆ, ಮೋಕ್ಷದ ಹಂತಕ್ಕೆ, ನೆಮ್ಮದಿಯ ನೆಲೆಗೆ ತಲುಪುತ್ತದೆ. ನಾವು ಮುಕ್ತರಾಗುವ ಪರಿ ಇದು.

ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲವೆಂದು ಶರಣರು ಬಯಲಿನ ಶೂನ್ಯತೆಯನ್ನು ವಿಸ್ತಾರವಾಗಿ ವ್ಯಾಖ್ಯಾನಿಸಿದ್ದಾರೆ.

**ಬುದ್ಧಿಯ ಚಿಂತನೆ**
**ಧರ್ಮ, ಹೃದಯದ**
**ಮಿಡಿತ ಪ್ರೇಮ**

ಈ ಧರ್ಮವು ವಿವೇಚನಯುಕ್ತವಾದಾಗ ಹೃದಯದಲ್ಲಿ ಪ್ರೇಮ ಮಿಡಿಯುತ್ತದೆ. ಅಂದರೆ, ಕವಿಯು ಧರ್ಮವು ಬುದ್ಧಿಯ ಚಿಂತನೆಯಲ್ಲಿ ವ್ಯಾಖ್ಯಾನಗೊಳ್ಳಬೇಕು. ಇನ್ನೊಬ್ಬರ ವಿಚಾರಗಳನ್ನು ಗೌರವಿಸುತ್ತಾ ಪರಸ್ಪರ ಮಿಡಿಯಬೇಕು ಎಂದಿದ್ದಾರೆ. ಪ್ರೇಮವು ಹೃದಯದ ಮಿಡಿತವಾಗಿರಬೇಕು, ಬರಿಯ ಬಾಹ್ಯ ಆಕರ್ಷಣೆ ಆಗಬಾರದು. ಆಗ ಮಾತ್ರ ವಿಶ್ವಮಾನವರಾಗಿ ಬದುಕುತ್ತೇವೆ.

ಸಾಮವೇದದಿಂದ **'ಪವಸೆ ಧರ್ಮಣಾ'**(೮೮೮) ಅಂದರೆ ಧರ್ಮದಿಂದ ಶುದ್ಧಿಯಾಗುವುದು ಎನ್ನಲಾಗಿದೆ. ಯುಜುರ್ವೇದದಲ್ಲಿ **'ರಶ್ಮಿನಾ ಸತ್ಯಾಯ ಸತ್ಯಂ ಜಿನ್ವ ಪ್ರೇತಿನಾ ಧರ್ಮಣಾ ಧರ್ಮ ಜಿನ್ವ ।'** (೧೫.೬) ಅಂದರೆ ಸತ್ಯವನ್ನು ಪ್ರೀತಿಸಿ, ಪ್ರೇಮಪೂರ್ವಕವಾಗಿ ಅನುಸರಿಸಿ, ಸ್ವೀಕರಿಸಿ. ಆಗ ಮಾತ್ರ ಸತ್ಯವನ್ನು ರಕ್ಷಿಸಬಲ್ಲಿರಿ. ಇದೇ ರೀತಿ ಉತ್ತಮವಾದ ಧರ್ಮವನ್ನು ಪ್ರೀತಿಸಿ, ರಕ್ಷಿಸಿ, ಸತ್ಯ ಮತ್ತು ಧರ್ಮದಿಂದ ಉನ್ನತಿಯನ್ನು ಹೊಂದುವಿರಿ ಎನ್ನಲಾಗಿದೆ.

**ಕಿಟಕಿಗಳಿಲ್ಲದ ಕೂಪ**
**ಧರ್ಮಾಂಧತೆಯ**
**ಪಂಜರ**

ಒಂದು ಮನೆಗೆ ಕಿಟಕಿ, ಬಾಗಿಲುಗಳು ನೀಡುವ ಬೆಳಕಿನ ಹೊಸತನದಂತೆ, ನಮ್ಮ ಮನಸ್ಸಿಗೂ ವಿಚಾರಗಳ ಪ್ರವೇಶಕ್ಕೆ ಕಿಟಕಿಗಳ ಮುಕ್ತತೆ ಬೇಕು. ಸ್ವಾರ್ಥವು ಯಾವಾಗಲೂ ಕೂಪದಂತೆ ಅಂಧಕಾರದಲ್ಲಿ ಕೂಡಿದ್ದು ಪರವಿಚಾರಗಳನ್ನು ಸ್ವೀಕರಿಸುವುದಿಲ್ಲ. ಈ ಧರ್ಮದ ವಿಚಾರದಲ್ಲಿಯೂ ಇಂದು ಇದೇ ಬಹುಮುಖ್ಯ ಸಮಸ್ಯೆ. ವಿದ್ಯಾವಂತರಾದವರೇ ಇಂದು ಧರ್ಮದ ಕುರಿತು ಅಂಧಾಭಿಮಾನ ಹೊಂದಿದ್ದಾರೆ. ಧರ್ಮವೆಂದರೆ ಸಂಸ್ಕೃತಿ. ಅದು ಎಲ್ಲರಿಗೂ ಮುಕ್ತವಾದ ವೇದಿಕೆ. ನಮ್ಮ ಧರ್ಮವೇ ಸರಿ, ಇನ್ನೊಂದು ಧರ್ಮ ಕೀಳು ಎಂಬುದು ಅಂಧತೆಯ ಲಕ್ಷಣ.

ಈ ಮನಸ್ಸುಗಳಿಗೆ ಬೇರೆ ಬೇರೆ ವಿಚಾರಗಳ ಪ್ರವೇಶದೊಂದಿಗೆ ಬೆಳಕು ಮೂಡಬೇಕು. ಈ ಬೆಳಕಿನ ಪ್ರವೇಶವಿಲ್ಲದೆ ಪಂಜರದಲ್ಲಿ ಸಿಲುಕಿ ಮನುಷ್ಯನು ಪರಸ್ಪರ ಗೋಡೆಗಳನ್ನು ನಿಲ್ಲಿಸಿಕೊಂಡು ದ್ವೇಷವನ್ನು

ಸಾಧಿಸುತ್ತಿದ್ದಾರೆ. ಇದರಿಂದ ಮುಕ್ತವಾಗಲು ವಿಶ್ವಮಾನವ ತತ್ವದ ವಿಚಾರಗಳನ್ನು ಅನುಸರಿಸಬೇಕಿದೆ.

**ನೂತ ನೂಲಿನಿಂದ**
**ದೇಶವನ್ನೇ**
**ಕಟ್ಟಿದ ಮಹಾತ್ಮ**

ಗಾಂಧಿಯು ತನ್ನ ಬದುಕನ್ನೇ ಆದರ್ಶವಾಗಿ ರೂಪಿಸಿದರು. ಸರಳತೆ, ಸ್ವದೇಶಿ ಬಳಕೆ, ಅಹಿಂಸೆಯ ತತ್ವಗಳು ಇಡೀ ಭಾರತವನ್ನು ಆಕರ್ಷಣೆ ಮಾಡಿ ಸ್ವಾತಂತ್ರ್ಯದ ಒಕ್ಕೊರಲಿನ ಕೂಗಿಗೆ ಕಾರಣರಾದರು. ಅವರ ಚರಕ ಸಂಹಿತೆಯು ಅದೆಷ್ಟು ಸರಳವೆಂದರೆ, ದೇಶದ ಪ್ರತಿಯೊಬ್ಬರಿಗು ಇಂದಿಗೂ ಆದರ್ಶ. ಆದ್ದರಿಂದಲೇ ಇವರು ನಮಗೆಲ್ಲಾ ಮಹಾತ್ಮರಾದರು.

**ಬರವಣಿಗೆಯ**
**ಕೊನೆಯ ಪುಟ**
**ಯಾರಿಗೂ ಸಿಗದು**

ಈ ಬರಹವೇ ಹೀಗೆ, ನಮ್ಮ ಬದುಕಿನ ಕಥೆಯಂತೆ ಒಮ್ಮೊಮ್ಮೆ ನಮ್ಮ ಕಥೆಯ ಪುಟ ನಮಗೆ ತಿಳಿಯದೇ ನಡೆದುಬಿಡುತ್ತವೆ. ಇನ್ನೂ ಓದುಗರಿಗಿನ್ನೆಲ್ಲಿ. ಯಾವುದೇ ಒಂದು ಕೃತಿಯು ಮುಕ್ತಾಯಗೊಳ್ಳುವುದಿಲ್ಲ. ಕೊನೆಯ ಪುಟವು ಓದುಗನ ಕಲ್ಪನೆಯಂತೆ ರೂಪಿತವಾಗಬಹುದು. ಜಪಾನಿ ಚಿತ್ರಗಳು ತೆರೆದುಕೊಳ್ಳುವ ಕಥೆಯಂತೆ. ಆದ್ದರಿಂದ ಇಲ್ಲಿ ಕವಿ ಹೇಳುತ್ತಿದ್ದಾರೆ, ಯಾರ ಕೊನೆಯ ಪುಟವನ್ನೂ ಓದುವ ಸಾಹಸ ಮಾಡಬೇಡಿ ಅದು ಸಿಗುವುದಿಲ್ಲ. ಅದು ಕಲ್ಪನೆಯೂ, ಅನಿವಾರ್ಯವೂ, ಆಕಸ್ಮಿಕವೂ ಏನಾದರೂ ಆಗಿರಬಹುದು.

**ಒಬ್ಬರೇ ನಗುವುದು**
**ಉಣ್ಣುವುದು**
**ಪರಮ ಸ್ವಾರ್ಥವೆ**

ನಗು, ಊಟ ಹಂಚಿ ಬಾಳಿದಷ್ಟೂ ತೃಪ್ತಿ ಹೆಚ್ಚು. ದುಃಖವು ವೈಯಕ್ತಿಕ. ಆನಂದ ಸಾರ್ವತ್ರಿಕ. ಆದರೆ, ನಾವು ದುಃಖವನ್ನಷ್ಟೇ ಹಂಚುತ್ತಾ, ಆನಂದವನ್ನು ಸಾಧ್ಯವಾದಷ್ಟು ಹೇಳದೆ ಮುಚ್ಚಿಡುತ್ತೇವೆ. ಎಲ್ಲರಿಗೂ ಈ ಸ್ವಾರ್ಥಗಳ ಕುರಿತು ಭಯವಿದೆ. ಆದ್ದರಿಂದಲೇ ವಿರುದ್ಧಮುಖಿಯಾಗಿ ಚಲಿಸುತ್ತಿದ್ದೇವೆ. ನಿಸ್ವಾರ್ಥರಾಗುವುದು ಈ ಮನುಷ್ಯ ಜೀವನದ ಬಹುದೊಡ್ಡ ಸಾಹಸವೇ ಸರಿ. ಹಂಚಿ ಬಾಳುವ ಮುಕ್ತತೆಯು ಆನಂದದ ಜೊತೆಗೆ, ಅಭಿಮಾನ ಹಾಗೂ ನೆಮ್ಮದಿಯನ್ನು ತರುತ್ತದೆ.

**ಕಲೆಯ ಪರಿಧಿಯೊಳ**

**ಗಲ್ಲದೆ ಕವಿ**

**ಬೆಳಗಲಾರ**

ಕವಿಯು ಭಾವಲೋಕದ ಸಾಮ್ರಾಜ್ಞಿ, ಇವನು ಸ್ವತಂತ್ರ ಪ್ರಜೆ. ಇವನ ಪ್ರತಿ ಕಲ್ಪನೆಯು ಕಲಾ ಪರಿಧಿಯ ಕೈಗೂಸುಗಳು. ನಾಟಕ, ಹಾಡು, ನೃತ್ಯ, ಹರಟೆ ಮುಂತಾದ ಎಲ್ಲಾ ಕಲಾ ಪ್ರಕಾರಗಳಿಗೂ ಕವಿಯೇ ಭಾವ ಹಾಗೂ ಅಕ್ಷರಗಳನ್ನು ಒದಗಿಸುವುದು. ಈ ಕಲೆಗಳಲ್ಲದೆ ಕವಿಯ ಯಾವುದೇ ಅಭಿವ್ಯಕ್ತಿಯು ಶ್ರೀ ಸಾಮಾನ್ಯರಿಗೆ ತಲುಪುವುದಿಲ್ಲ. ಎಲ್ಲರೂ ಅಕ್ಷರಗಳನ್ನು ಓದಲಾರರು. ಅಂತಹ ಎಲ್ಲಾ ಮನಸ್ಸುಗಳಿಗೂ ಸಂಗೀತ, ನೃತ್ಯ, ಅಭಿನಯಗಳ ಮೂಲಕ ಕವಿಯ ಅಭಿವ್ಯಕ್ತಿಯನ್ನು ಪಸರಿಸಲಾಗುತ್ತದೆ.

ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತರು, ಗೋಕಾಕ್, ಅನಂತಮೂರ್ತಿ, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ ಮೊದಲಾದಂತೆ ಕೆ.ಎಸ್.ನ, ನಿಸಾರ್, ಎಚ್.ಎಸ್.ವಿ., ಲಕ್ಷ್ಮಣ್ ರಾವ್ ಮೊದಲಾದಂತೆ ಸಂಗೀತದಲ್ಲಿ ಸುಧೆ ತುಂಬಿದ ಕವಿಗಳ ಬಾಳು, ಕಲೆಯ ಮೂಲಕವೇ ಪ್ರಸಿದ್ಧಿಗೊಂಡಿತು.

**ಹದಿನೇಳರಾಟ**

**ಅಕ್ಕರದ**

**ಸರಮಾಲೆ ಕವಿತೆ**

**ಈ ಹೈಕು**

**ಹದಿನೇಳರಲ್ಲಿ**

**ಇಪ್ಪತ್ತೆಂಟನಾಡುವುದು**

ಹಾಯ್ಕುವನ್ನು ಹೈಕು ಎಂದು ಕೂಡ ಕರೆಯುವರು. ಜಪಾನಿನಲ್ಲಿ ಹುಟ್ಟಿ, ವಿಶ್ವ ಪ್ರಸಿದ್ಧವಾದ ಕಿರು ಕಾವ್ಯ ಪ್ರಕಾರ. ೧೯ನೇ ಶತಮಾನದ ಕೊನೆಯಲ್ಲಿ ಜಪಾನಿನ ಬರಹಗಾರ ಮಸೊಕಾ ಶಿಕಿ ಅವರು ಈ ಹಾಯ್ಕು ಎಂಬ ಹೆಸರನ್ನು ನೀಡಿದರು. ಈ ಮೇಲಿನ ಸಾಲುಗಳು ಅದರ ಲಕ್ಷಣವನ್ನು ಕುರಿತು ತಿಳಿಸುತ್ತವೆ. ಮೇಲಿನ ಪದ್ಯವು ೧೭ ಅಕ್ಷರಗಳಲ್ಲಿ, ೨೮ ಅರ್ಥಗಳನ್ನು ಅಂದರೆ ಹಲವು ಅರ್ಥಗಳನ್ನು ನೀಡುವ ವಿಶೇಷತೆ ಹೊಂದಿದೆ.

**ಜನಪ್ರಿಯ ಹಾಯ್ಕುವಿನ ಲಕ್ಷಣ :**

೧೭ ಅಕ್ಷರಗಳಲ್ಲಿ ೨೮ ಅರ್ಥ ನೀಡುವ ಕಿರು ಕವಿತೆಗಳು

ಮೊದಲ ಸಾಲು ಐದು ಅಕ್ಷರಗಳು
ಎರಡನೆಯ ಸಾಲು ಏಳು ಅಕ್ಷರಗಳು
ಮೂರನೇ ಸಾಲು ಐದು ಅಕ್ಷರಗಳು

ಇದು ವಿಶ್ವದಾದ್ಯಂತ ಪ್ರಸಿದ್ಧವಾಗಿರುವ ಜನಪ್ರಿಯ ಕಾವ್ಯ ಪ್ರಕಾರ. ಇದನ್ನು ಪ್ರೇಮ, ವಿರಹ, ನೋವನ್ನು ಅಭಿವ್ಯಕ್ತಪಡಿಸಲು ಬಳಸಬಹುದಾದ ಅರ್ಥಪೂರ್ಣ ಶೈಲಿಯಾಗಿದೆ. ಹದಿನೇಳು ಅಕ್ಷರಗಳಲ್ಲಿಯೇ ಕವಿತೆ ಹೆಣೆಯುವ ಜಾಣ್ಮೆಯು ಕವಿಗಲ್ಲದೆ ಪದಬಂಧಕರಿಗೆ ಬರದು. ಜಿ.ಎಸ್.ಎಸ್ ಹೇಳುವಂತೆ 'ಬರಿ ಪದಕ್ಕೆ ಪದ ಜತೆಗಿದ್ದ ಮಾತ್ರಕ್ಕೆ ಪದ್ಯವಾದೀತು ಹೇಗೆ?' ಅಲ್ಲವೆ! ಕವಿತೆಗೆ ತನ್ನದೇ ತತ್ವವಿದೆ. ವಿಶ್ವದ ಎಲ್ಲಾ ಪರಿಸರಕ್ಕೂ, ಮನಸ್ಸುಗಳಿಗೂ ಹೊಂದಿಕೆಯಾಗುವ ಚಿಂತನೆಯು ಕವಿತೆಯಲ್ಲಿ ಅಡಗಿರಬೇಕು. ಅಂತಹ ಸಾಹಸವನ್ನು ಹಾಯ್ಕುಗಳು ಕೂಡ ಹದಿನೇಳು ಅಕ್ಷರಗಳಲ್ಲಿಯೇ ಕಟ್ಟುವ ಸಾಹಸವನ್ನು ನಿರೂಪಿಸುತ್ತವೆ.

**ಸುಡುವ**
**ಕಳೇಬರದಲ್ಲಿ**
**ಸ್ವರ್ಗ-ನರಕದ ಘಮ**

ಸಾವಿಗೆ ಅರ್ಥ ಹಚ್ಚುತ್ತೇವೆ. ಸ್ವರ್ಗಕ್ಕೆ ಹೋಗುವುದು, ನರಕಕ್ಕೆ ಹೋಗುವುದು ಎಂಬ ನುಡಿಗಳನ್ನು ಚರ್ಚಿಸುತ್ತೇವೆ. ಇದರ ಹಿಂದೆ ನಮ್ಮ ಬದುಕಿನ ಮೌಲ್ಯಗಳು ಅಡಗಿರುತ್ತವೆ. ಒಳ್ಳೆಯ ಕಾರ್ಯಗಳನ್ನು ಮಾಡಿದಾಗ ಸ್ವರ್ಗಕ್ಕೆ ಹೋಗಬಹುದೆಂಬ ನಂಬಿಕೆಯು, ನಮ್ಮನ್ನು ಒಳಿತಿನ ಬದುಕಿಗೆ ಪ್ರೇರೇಪಿಸುತ್ತದೆ. ನರಕದ ಭಯದಲ್ಲಾದರೂ ಕೆಟ್ಟ ಕೆಲಸ ಮಾಡಬಾರದೆಂಬ ಎಚ್ಚರಿಕೆಯು ಮನುಷ್ಯನನ್ನು ಉತ್ತಮಗೊಳಿಸುತ್ತದೆ.

ಸಾವಿನ ನಂತರ ಶವ(ಕಳೇಬರ)ವನ್ನು ಸುಡುವಾಗ ಅವನ ಕೆಲಸಗಳು ಸ್ವರ್ಗ-ನರಕದ ಸ್ವರೂಪದಲ್ಲಿ ಮಾತನಾಡುತ್ತವೆ. ಒಳ್ಳೆಯ ಮನುಷ್ಯನಾದರೆ, ಎಲ್ಲರಲ್ಲೂ ಪಾಪಪ್ರಜ್ಞೆ ಕಾಡುವ ಮೂಲಕ 'ಅವನು/ಳು ಬದುಕಬೇಕಿತ್ತು' ಎಂಬ ಬಹುದೀರ್ಘ ಹಂಬಲ ಉಳಿಯುತ್ತದೆ. ನರಕದ ಆಲೋಚನೆಯಾಗಿ ಸಾವಿನ ಕೆಲವೇ ದಿನಗಳಲ್ಲಿ ಜನರು ಆ ವ್ಯಕ್ತಿ ಕುರಿತು ಮರೆಯುತ್ತಾರೆ.

ಶ್ರೀ ರಿಷಿ ಸಾಹಿತ್ಯ ರಚನೆಯ ಸಿ. ಅಶ್ವಥ್ ಅವರ ದನಿಯಲ್ಲಿ ನಾವೆಲ್ಲಾ ಕೇಳಿರುವ ಹಾಡು ನೆನಪಾಗುತ್ತದೆ. "ಸ್ವರ್ಗ ನರಕ ಎಲ್ಲಾ, ಮೇಲಿಲ್ಲ ಕೇಳು ಜನಕ ಇಲ್ಲೆ ಕಾಣಬೇಕು, ಉಸಿರಿರೋ ಕೊನೆತನಕ". ಈ ಮೂರು ದಿನದ ಸಂತೆಯಲ್ಲಿ ನಗುನಗುತ್ತಾ ಬಾಳುವ ಕರೆಯನ್ನು ಕವಿಯು ಒಂದು ಚಿತ್ರಾತ್ಮಕ ನೋಟದಲ್ಲಿ

ಸ್ಪಷ್ಟಪಡಿಸಿದ್ದಾರೆ.

**ಎಲ್ಲವೂ ವಿಸ್ಮಯವೆ**
**ಈ ಮನಸ್ಸಿಗೆ**
**ಪ್ರಕೃತಿಗಲ್ಲ**

ಪ್ರಕೃತಿಯು ಸಹಜವಾದುದು. ಅದರ ಪ್ರತಿ ಕ್ರಿಯೆಯು ಪ್ರಕ್ರಿಯೆಯಾಗಿ ನಡೆಯುತ್ತಲೇ ಇರುತ್ತದೆ. ಆದರೆ, ಅಜಾಗೃತನಾದ ಮನುಷ್ಯನು ಈ ವಿಸ್ಮಯಗಳನ್ನು ಕಂಡು ಕುತೂಹಲಿಯಾಗುತ್ತಾನೆ. ಏಕೆಂದರೆ, ಪ್ರಕೃತಿಯು ವಿಶಾಲವಾದುದು, ನೋಡಿದಷ್ಟೂ ನೋಟ ಸವೆಯದ ವಿಸ್ತಾರವಾದ ಅಕ್ಷಿಸಾಕ್ಷಿಗಳನ್ನು ನಿತ್ಯವೂ ನೀಡುತ್ತದೆ.

**ಮರಳಿ ಬರುವೆ**
**ಎಂಬುದು ಮನದ**
**ಬಿಸಿಲಕೋಲು**

ಗುರುರಾಜ ಕರ್ಜಗಿ ತಮ್ಮ ಉಪನ್ಯಾಸದಲ್ಲಿ ಹೇಳಿದ ಅತ್ಯುತ್ತಮ ಸಂದೇಶವಿದೆ. ನಾವು ಇನ್ನೊಬ್ಬರೊಂದಿಗೆ ಮಾತನಾಡುವಾಗ ಇದುವೆ ಕೊನೆಯ ಮಾತು, ಇದುವೆ ಕೊನೆಯ ಭೇಟಿ ಎಂಬಂತೆ ಮಾತನಾಡಿದಾಗ ಸಂಬಂಧವು ಅರ್ಥಪೂರ್ಣವಾಗಿರುತ್ತದೆ. ಜೊತೆಯಲ್ಲಿ ನಾಳೆಯೇ ತಿಳಿಯದ ನಮಗೆ ಕಲ್ಪನೆಯ ಭರವಸೆಯು ಸಲ್ಲದು ಎಂಬ ಮಾತು ಅತ್ಯಂತ ಸ್ಪೂರ್ತಿದಾಯಕ. ಮರಳಿ ಬರುವೆ ಎಂಬ ಆಶಾವಾದತನವಾದರೂ ಅದೇ ಸತ್ಯವಲ್ಲ. ಅದೊಂದು ಬಿಸಿಲಕೋಲಿನಂತೆ ಕಿರಿದಾದ ಬೆಳಕಷ್ಟೆ.

ಇದೇ ಕವಿತೆಯನ್ನೂ ಹೀಗೂ ಓದಬಹುದು. ಒಂದು ಚಿಕ್ಕ ಬೆಳಕು ಕೂಡ ಆಶಾದಾಯಕವಾಗಿ ನಮ್ಮನ್ನು ಭರವಸೆಯಲ್ಲಿ ಗೆಲ್ಲಿಸಬಹುದು. ಎಷ್ಟೋ ಸಂದರ್ಭದಲ್ಲಿ ನಾವು ನಮ್ಮನ್ನು ಕಳೆದುಕೊಳ್ಳುವಾಗ ಚಿಕ್ಕ ಆಶಾಕಿರಣವು ನಮ್ಮನ್ನು ಗೆಲ್ಲಿಸುತ್ತದೆ.

**ರೇಶಿಮೆ ಹುಳದ**
**ನೂಲಿನಲ್ಲಿ ಆ**
**ಜೀವ ಬಂಧ ಮುಕ್ತ**

ರೇಷ್ಮೆ ಸೀರೆಯ ತಯಾರಿಕೆಯ ಹಿಂದೆ ಒಂದು ಹುಳುವಿನ ಜೀವನ ಕ್ರಮವೇ ಅಡಗಿದೆ. ಚಂದ್ರಿಕೆಯ

ಒಳಗಿನ ಜೀವಧಾತುವಿನ ಬದುಕಿನ ಕ್ರಮವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ರೇಷ್ಮೆ ಸೀರೆಯು ನೋಡಲು, ಮೌಲ್ಯದಲ್ಲೂ ಅತ್ಯಂತ ಎತ್ತರ ಹಾಗೂ ದುಬಾರಿ. ಇದರ ತಯಾರಿಕೆಯಲ್ಲಿ ಒಂದು ಜೀವದ ಬಂಧಮುಕ್ತತೆಯ ಕಥೆ ಇದೆ. ಹೀಗೆ ಪ್ರತಿಯೊಂದು ಕಾರ್ಯವೂ ಸರಪಳಿಯ ಕ್ರಮದಲ್ಲಿ ಜರುಗುತ್ತವೆ. ಒಂದು ಗುಣಮಟ್ಟದ ಕಾರ್ಯದ ಹಿಂದೆ ಶ್ರಮದ ಚೈತನ್ಯವನ್ನೂ ನಾವು ಪರಿಗಣಿಸಬೇಕು. ಒಂದು ತುತ್ತು ಅನ್ನದ ಹಿಂದೆ ನೂರಾರು ಜನರ ಪರಿಶ್ರಮವಿರುತ್ತದೆ.

**ಗುಡಿಸಿದಷ್ಟೂ**
**ಸೇರುತ್ತಲೇ**
**ಇದೆ ಈ ಮನದ ಕಸ**

ಭೂಮಿಯ ಮೇಲೆ ಬೀಳುವ ಕಸವನ್ನು ಗುಡಿಸಬಹುದು. ಸ್ವಚ್ಛಮಾಡಬಹುದು. ಆದರೆ, ಮನಸ್ಸಿಗೆ ಕಸ ಬಿದ್ದು ಕಶ್ಮಲವಾದರೆ ಕಷ್ಟಕರ. ಬಹಿರಂಗದ ಕಸವನ್ನು ಯಾರು ಬೇಕಾದರೂ ಸ್ವಚ್ಛಮಾಡಬಹುದು. ಅಂತರಂಗದ ಕಸವನ್ನು ತಾವೇ ಸ್ವಚ್ಛಮಾಡಿಕೊಳ್ಳಬೇಕು. ಈ ಮನಸ್ಸು ಚಂಚಲ. ವಿಷಯಾಸೆಗಳಿಗೆ ಸದಾ ಹಂಬಲಿಸುತ್ತದೆ. ಪ್ರತಿಕ್ಷಣವೂ ನಾವು ಈ ಸಮಾಜದ ಆಸೆಗಳಿಗೆ ಬಲಿಯಾಗಿ ಕಶ್ಮಲಮಾಡಿಕೊಳ್ಳುತ್ತಿದ್ದೇವೆ. ಅದನ್ನು ಸ್ವಚ್ಛಮಾಡಿಕೊಳ್ಳಲು ನಮ್ಮ ಮನಸ್ಸು ಸದಾ ಹಂಬಲಿಸುತ್ತದೆ. ಯೋಗ, ಧ್ಯಾನ, ಒಳ್ಳೆಯ ವಿಚಾರಗಳೆಲ್ಲಾ ಕಾಣುವುದು, ಕೇಳುವುದು ಮಾಡತ್ತಲೇ ನಾವು ನಮ್ಮ ಬದಲಾವಣೆಗಳಿಂದ ಜಾರುತ್ತೇವೆ. ಮತ್ತೆ, ಅದೇ ಕಶ್ಮಲ ಆಲೋಚನೆಗಳಿಂದ ವರ್ತಿಸುತ್ತೇವೆ. ಆದ್ದರಿಂದ ಆಸೆಗಳ ಮಿತಿಯು ಶುದ್ಧತೆಗೆ ಹಾದಿ ಎಂಬಂತೆ ಸರಳತೆ, ಸ್ವಚ್ಛ ಆಲೋಚನೆಗಳಿಗೆ ನಾವು ಸಿದ್ಧರಾಗಬೇಕಿದೆ.

**ಬೀದಿಯಲ್ಲಿ ಬಿದ್ದ**
**ಟೊಪ್ಪಿಗೆಯಲಿ**
**ಕಂದನ ಬೆವರು**

ಇದು ಶ್ರಮಿಕರ ಕುರಿತು ಹೇಳುವ ಹಾಯ್ಕು. ತನ್ನ ಕಂದನಿಗಾಗಿ ಶ್ರಮಿಸುವ ಬಡವನು ಸದಾ ಕಷ್ಟಪಡುತ್ತಾನೆ. ಇಲ್ಲವೆ ಬಾಲಕಾರ್ಮಿಕ ಪದ್ಧತಿ ಕುರಿತು ಕೂಡ ಕವಿತೆ ಧ್ವನಿಸಬಹುದು. ಬಡತನ, ಹಸಿವು ಕುರಿತು ಟೊಪ್ಪಿಗೆಯೇ ಹೇಳುತ್ತದೆ. ಅವನ ಬಡತನವನ್ನು ಹಾಗೂ ಶ್ರಮವನ್ನು ಎಂಬುದು ಕವಿಯ ಚಿಂತನೆ.

**ನಾದ**
**ಲೀಲೆಯ ತರಂಗ**
**ಎಲ್ಲರಿಗೂ ದಕ್ಕುವುದಿಲ್ಲ**

ಕಲೆಯು ಎಲ್ಲರಿಗೂ ಒಲಿಯುವುದಿಲ್ಲ. ಯಾರು ಅತ್ಯಂತ ಶ್ರಮದಾಯಕವಾಗಿ ಕಲೆಯನ್ನು ಗೌರವಿಸುತ್ತಾರೆಯೋ ಅವರಿಗೆ ಕಲೆಯು ಕೈ ಬಿಡುವುದಿಲ್ಲ. ಸಂಗೀತ, ನೃತ್ಯ ಮೊದಲಾದ ಕಲೆಗಳು ಶ್ರದ್ಧೆ, ಕಲೆಯ ಕುರಿತ ಭಕ್ತಿ, ಸತತ ಅಭ್ಯಾಸಗಳಿಂದ ಇವುಗಳನ್ನು ಧ್ಯಾನಿಸಬೇಕು. ಇಂದಿಗೂ ಸಂಗೀತಕಾರರು ಈ ಕಲೆಗಳ ಅಭ್ಯಾಸಕ್ಕಾಗಿ ಇಡೀ ಜೀವನವನ್ನು ಮುಡುಪಿಟ್ಟು ಬದುಕುತ್ತಾರೆ.

**ಹೂವು ಗಿಡದಲಿ**
**ಅರಳಿ ನಗುತ್ತಿದ್ದರೆ**
**ಸೊಬಗು**

ಕುವೆಂಪು ಅವರು **ಹೂ ದೇವರು** ಕವಿತೆಯಲ್ಲಿ ಹೂ ಪ್ರಕೃತಿಯಲ್ಲಿ ಸಹಜವಾಗಿ ಅರಳಬೇಕೆಂಬ ಅನಂತಸಾರ ಸಂದೇಶವನ್ನು ತಿಳಿಸಿದ್ದಾರೆ. ಅಲ್ಪಮತಿಗಳಾದ ನಾವು ಹೂ ಒಂದು ಉದ್ಯಮದ ವಸ್ತುವನ್ನಾಗಿಸಿ, ಅಲಂಕಾರದ ಆನಂದದಲ್ಲಿ ನೋಡುತ್ತಿದ್ದೇವೆ. ಈ ಪ್ರಕೃತಿಯ ಪ್ರತಿ ಅಂಶವು ಸಹಜವಾಗಿದ್ದರೆ ಮಾತ್ರ ಲೋಕದ ಸಹಜತೆಯು ಉಳಿಯುತ್ತದೆ.

**ನೆಲಕೆ ಸಲ್ಲದು**
**ನಭದ ಕನಸು**
**ತಾರೆಗಳೂರು**

ನಮ್ಮ ಕನಸು, ಆಸೆ–ಆಕಾಂಕ್ಷೆಗಳು ಅಪರಿಮಿತ. ಆಕಾಶದಷ್ಟೇ ಅಗಲ, ನಕ್ಷತ್ರಗಳಷ್ಟೆ ಅಗಣಿತ. ಈ ಸಾಲಿನಲ್ಲಿ ಆಕಾಶದಲ್ಲಿ ಕಾಣುವ ನಕ್ಷತ್ರಗಳು ಅಗಣಿತವಾದವು. ಅವುಗಳನ್ನು ನೋಡಿ ಲೆಕ್ಕಿಸುವುದೂ ಕಷ್ಟಕರ. ಇವು ಈ ನೆಲದ ಸಹಜತೆಗೆ ಹೇಗೆ ಲಭಿಸಲು ಸಾಧ್ಯ. ನಮ್ಮ ಮಿತಿಗಳು ನಮಗೆ ಕಾಣಬೇಕು. ಆಗ ಮಾತ್ರ ಆಸೆಗಳ ಅಂತರವೂ ನಮಗೆ ಲಭಿಸುತ್ತದೆ.

**ಊರ ತೊರೆದರೂ**
**ಮನದಲ್ಲಿ ಉಳಿದೆ**
**ಹಸಿರಾಗಿ**

ಆಧುನಿಕತೆ ಪಸರಿಸಿದಷ್ಟೂ ಮನುಷ್ಯನ ಆಲೋಚನೆ ವಿಸ್ತರಿಸಿತು. ಊರು, ನಾಡು, ದೇಶ, ವಿಶ್ವ ಮೊದಲಾದಂತೆ ತನ್ನ ಪ್ರಯಾಣ ಪ್ರಾರಂಭಿಸಿ ಅಲ್ಲೇ ಉಳಿದು ಬದುಕಲು ಪ್ರಾರಂಭಿಸಿದ. ಹುಟ್ಟಿದ ಊರನ್ನು

ತೊರೆದು ಬಂದರು ತನ್ನ ಬದುಕಿನ ಪ್ರತಿಕ್ಷಣಗಳೂ ಹಚ್ಚಹಸಿರಾಗಿರುತ್ತವೆ. ಮನೋವೈಜ್ಞಾನಿಕವಾಗಿ ಒಬ್ಬ ಮನುಷ್ಯ ತಾನು ಹುಟ್ಟಿ ಬೆಳೆದ ೧೬ ವರ್ಷಗಳ ಪ್ರಕೃತಿಯನ್ನು ಇಡೀ ಜೀವನಪೂರ್ತಿ ಕೊಂಡೊಯ್ಯುವನು ಎನ್ನಲಾಗಿದೆ. ಉದಾಹರಣೆಗೆ ಕುವೆಂಪು ಬರೆದ ಸಾಹಿತ್ಯದ ಪ್ರತಿ ಅಂಶದಲ್ಲೂ ಮಲೆನಾಡು ಹಾಸುಹೊಕ್ಕಾಗಿದೆ. ಬಾಲ್ಯದ ಪ್ರತಿ ಅಂಶಗಳು ನಮ್ಮ ಆಚಾರ, ವಿಚಾರ ಮೊದಲಾದಂತೆ ತಳುಕುಹಾಕಿಕೊಳ್ಳುವ ಕ್ರಮಕ್ಕೆ ಸದಾ ಹಸಿರಾಗಿ ಉಳಿಯುವುದು ಎನ್ನಬಹುದು.

**ಕಥೆ ಅಸ್ತಿತ್ವ**
**ಪದದಲ್ಲಿ ಎಂದೆ**
**ಬದುಕು ನಾಚಿತು**

ಇಲ್ಲಿ ಪದವೆಂದರೆ ಜನಪದರ ನುಡಿಯೇ..? ಪದವೆಂದರೆ ಅಕ್ಷರಗಳ ಸಮೂಹವೇ.. ಕವಿಯು ಹಾಯ್ಕುವಿನ ಮೂಲಕ ದ್ವಂದ್ವಾರ್ಥ ಸಹಿತಗೊಳಿಸಿದ್ದಾರೆ. ಕಥೆಯ ಅಸ್ಥಿತ್ವ ಅಡಗಿರುವುದೇ ಜನರ ನಾಲಗೆಯಲ್ಲಿ. ಅವರಾಡುವ ಪದಗಳಲ್ಲಿ ಎನ್ನಬಹುದು. ಹಾಡೆಂದರೆ ಬರೀ ಸಂಗೀತವಲ್ಲ. ಭಾರತೀಯ ನೆಲಮೂಲದ ಪ್ರತಿಸ್ವರದಲ್ಲಿಯೂ ಒಂದೊಂದು ಕಥೆಗಳು ಮನೆಮಾಡಿರುತ್ತವೆ. ಆದರೆ, ಈ ಕಥೆಗಳು ಅಕ್ಷರಗಳಲ್ಲಿ, ಹಾಡುಗಳಲ್ಲಿ ಅಸ್ಥಿತ್ವಗೊಳ್ಳುವುದಿಲ್ಲ. ಬದಲಾಗಿ ಬದುಕಿನ ಅನುಭವದಲ್ಲಿ ಸಹಜವಾಗಿಯೇ ಸೃಷ್ಟಿಗೊಳ್ಳುತ್ತವೆ.

**ನೊಂದ ಬೆರಳಲಿ**
**ಮುಟ್ಟಿದರೆ**
**ಮೈಯೆಲ್ಲವೂ ನೋವೆ!**

ನೊಂದವರಿಗಷ್ಟೇ ಗೊತ್ತು ಈ ನೋವಿನ ಬೆಲೆಯು. ನೋವು ಎಂದಿಗೂ ಸಾಂತ್ವಾನ ಹೇಳಲಾರದು, ನೋವಿನಲ್ಲಿ ನೋವುಗಳಷ್ಟೇ ಉದಿಸುತ್ತವೆ. ಈ ನೋವಿನ ಹಾದಿಯು ಹಲವು ನೋವುಗಳ ಸೃಷ್ಟಿಯೇ ಹೊರೆತು, ನಲಿವಿನ ಆಕಾಂಕ್ಷೆಯಲ್ಲ. ನೊಂದವರು ಮಾತ್ರ ನೋವಿಗೆ ಕಣ್ಣೀರು ಮಿಡಿಯುತ್ತಾರೆ. ನೋವನ್ನು ನಾದಗೊಳಿಸಬಲ್ಲರು. ನೋವಿನ ಪ್ರಧಾನ ಆಶಯವೆಂದರೆ ತನ್ನನ್ನು ತಾನು ತಿಳಿಗೊಳಿಸುವುದು.

**ಪ್ರೀತಿಗೆ ಬೇಕು**
**ಒಂದಿಷ್ಟು ಸಮಯ**
**ಉಡುಗೊರೆಯಲ್ಲ**

ಪ್ರೀತಿ ಕುರಿತು ಈ ಕಾಲದ ಅತ್ಯುತ್ತಮ ವ್ಯಾಖ್ಯಾನವಿದು. ತಂದೆ, ತಾಯಿ, ಅಣ್ಣ, ತಮ್ಮ, ಸಖಿ, ಸಖ, ಮಕ್ಕಳು, ಆಪ್ತರು ಮೊದಲಾದಂತೆ ಪ್ರೀತಿಯ ಅಭಿವ್ಯಕ್ತಿ ಮತ್ತು ಸ್ವೀಕಾರದಲ್ಲಿ ಉಡುಗೊರೆಗಳನ್ನು ನಿರೀಕ್ಷೆ ಮಾಡುತ್ತಿದ್ದೇವೆ. ಅದಕ್ಕಾಗಿಯೇ ಔತಣಕೂಟ ಏರ್ಪಡಿಸುತ್ತೇವೆ. ಇಂತಹ ಕೂಟಗಳಲ್ಲಿ ಯಾರಾದರೂ ಸ್ವಲ್ಪ ಸಮಯ ತಮ್ಮ ಅಂತರಂಗ ಭಾವನೆಗಳನ್ನು ಹಂಚಿಕೊಳ್ಳುವ ಪ್ರಯತ್ನ ಮಾಡುತ್ತಾರೆಯೇ.. ಸಖ–ಸಖಿಯರ ಪ್ರೀತಿಯಲ್ಲಿ ವಿಶ್ರಾಂತವಾದ ಮಾತು–ಕಥೆಗಳಿವೆಯೇ ಎಂಬ ಪ್ರಶ್ನೆ ನಮ್ಮದಾಗಬೇಕಿದೆ. ಪರಸ್ಪರ ಪ್ರೀತಿಸುವ ಯುವ ಮನಸ್ಸುಗಳು ತಮ್ಮ ಪ್ರೀತಿಯನ್ನು ಸರಿಯಾಗಿ ತಿಳಿಸಲು ಎಷ್ಟು ಸಮಯ ನೀಡುತ್ತಿದ್ದಾರೆ. ಎಂಬ ಸಾಕಷ್ಟು ಭಯಗಳು ನಮ್ಮನ್ನು ಕಾಡುತ್ತಿವೆ.

ಉಡುಗೊರೆ ಯಾವಾಗಲೂ ಆರ್ಥಿಕ ಚಿಂತನೆ, ಅದು ಬರಿ ವ್ಯವಹಾರದ ಸಂಕೇತ. ಪ್ರೀತಿಯಲ್ಲಿ ಪರಸ್ಪರ ಸ್ವಲ್ಪ ಸಮಯ ನೀಡುತ್ತಾ ಅರ್ಥಮಾಡಿಕೊಂಡು ಬದುಕಬೇಕಿದೆ. ಪ್ರೀತಿಯು ಬರಿ ಗಂಡು ಹೆಣ್ಣಿನ ಸಂಕೇತವಲ್ಲ. ಅದು ಸರ್ವರಲ್ಲೂ ಪ್ರಾಣಿ–ಪಕ್ಷಿಯಾದಿಯಲ್ಲೂ ಮೂಡುತ್ತದೆ. ಉಳಿಯುವುದು ಮುಖ್ಯ ಅಷ್ಟೆ.

**ಅನಾದಿ ಕಾಲದಿಂದಲೂ**
**ಮಕ್ಕಳ ನೆಂಟ**
**ಚಂದಮಾಮ**

ನಮ್ಮ ಬಾಲ್ಯಗಳನ್ನು ರೂಪಿಸಿದ್ದು ಈ ಪ್ರಕೃತಿಯೇ ಹೊರೆತು, ಯಾವ ಆಧುನಿಕತೆಯೂ ಅಲ್ಲ. ನಾವು ಚಿಕ್ಕಮಕ್ಕಳಿರುವಾಗ ತಾಯಿ ಊಟಮಾಡಿಸಲು ಪ್ರಯತ್ನಿಸುವಾಗ ಸಹಜವಾಗಿ ನಾವೆಲ್ಲರೂ ಹಠಮಾಡಿರುತ್ತೇವೆ. ಆಗ ಆಕಾಶದಲ್ಲಿ ಕಾಣುವ ಚಂದ್ರನನ್ನು ತೋರಿಸಿ, ಪ್ರೀತಿ–ಭಯದ ಕಥೆಗಳನ್ನು ಮೂಡಿಸಿದ ಅನ್ನ, ನಿದ್ರೆಗಳ ತೃಪ್ತಿ ನಮ್ಮೆಲ್ಲರ ಬದುಕಿನಲ್ಲಿದೆ. ಈ ಪ್ರಕ್ರಿಯೆಯು ಅನಾದಿ ಕಾಲದಿಂದಲೂ ನಡೆದು ಬಂದಿರುವ ಒಂದು ಪ್ರಕ್ರಿಯೆಯಾಗಿ ಕಾಣುತ್ತೇವೆ. ಚಂದಿರನೆಂದರೆ ತಂಪಾದ ಕನಸು, ಹಲವು ಜೀವಗಳನ್ನು ಸಮಾಧಾನಿಸುವ ಸಂಕೇತವಾಗಿದೆ.

**ಬಯಕೆ ಇರದೆ**
**ಕವಿತೆ ಮನದಿಂದ**
**ಉದುರೀತೆ?**

ಕವಿತೆಯು ಹುಟ್ಟುವುದು ಮನದ ಬಯಕೆಯಿಂದ ಹೊರೆತು, ಪದಗಳ ಕಟ್ಟುವಿಕೆಯಿಂದಲ್ಲ. ಪ್ರೀತಿ ಇಲ್ಲದೆ ಕವಿತೆಯೂ ಹುಟ್ಟುವುದಿಲ್ಲವೆಂದು ಜಿ.ಎಸ್.ಎಸ್ ತಿಳಿಸಿರುವುದು ಸತ್ಯವೇ ಆಗಿರುತ್ತದೆ. ಒಂದು

ಕವಿತೆಯು ಮನದ ಅನುಭವದಲ್ಲಿ ಮಾಗಿ, ಫಲಕೊಡುವ ಅಮೃತವಾಗಿರುತ್ತದೆ.

**ಭಾಷೆ ಸವೆದ ಜಾಡು**
**ಅದಕ್ಕೆ ಹೊಸತನ**
**ಕಾವ್ಯದಿಂದ**

ರಾಜಶೇಖರನ ವ್ಯಾಖ್ಯಾನದಂತೆ, ಒಬ್ಬನ ಕೈ ಮತ್ತೊಬ್ಬನ ಜೇಬಲ್ಲಿರಿಸಿ ಹೇಳಬೇಕಾದುದದನ್ನು ಈಗಾಗಲೇ ಹೇಳಿ, ಹೇಳಿ ಸವೆಸಿದ್ದೇವೆ. ಈ ಭಾಷೆಯು ನುಡಿ, ಬರೆಹ ಮೊದಲಾದಂತೆ ಇನ್ನೊಬ್ಬರ ನುಡಿಯಾಗಿ ಸವೆದು ಹೋಗಿರುತ್ತದೆ. ಅದಕ್ಕೆ ಸಹಜವಾದ ಸೊಬಗು ಮೂಡಬೇಕೆಂದರೆ, ಹೊಸತನ ಮೆರುಗು ಮೂಡುವುದು ಕಾವ್ಯ ಪ್ರಕಾರದಲ್ಲಿಯೇ ಆಗಿದೆ. ಭಾವಗಳನ್ನು ಬದಲಿಸಿ, ಹೊಸ ರೂಪದ ಶೃತಿಯ ಮಿಡಿಯುವುದು ಕಾವ್ಯವೇ ಆಗಿದೆ. ಕಾವ್ಯಕ್ಕೆ ಹೃದಯದ ನಂಟು, ಭಾವಕೋಶದ ಬೃಹತ್ ಪ್ರಯೋಗಕೋಶವಾಗಿ ತಿಳಿಯಬಹುದು.

**ನಾ ಕಂಡೆ**
**ಲೋಕಚರಿತೆಯೆಂಬ**
**ಸಾಹಿತ್ಯದ ಕಣ್ಣಲಿ**

ಸಾಹಿತ್ಯವು ಭಾವಲೋಕದ ಜೊತೆಗೆ ಸದಾ ಈ ಲೋಕ ಚರಿತ್ರೆಯನ್ನು ಧ್ವನಿಸುತ್ತದೆ. ಇಂದಿಗೂ ಪುರಾಣ ಪಾತ್ರಗಳ ಮೂಲಕ ವರ್ತಮಾನಗಳನ್ನು ಅವಲೋಕಿಸಲಾಗುತ್ತದೆ. ಸಾಹಿತ್ಯವು ಪ್ರತಿಮೆ, ರೂಪಕಗಳೊಂದಿಗೆ ರಸ, ಧ್ವನಿ, ಅಲಂಕಾರ ಸಹಿತವಾದುದು. ಅದು ಹೇಳುವಾಗ ನೇರವಾಗಿ ಹೇಳಲಾರದು, ಒಳದನಿಯಲ್ಲಿಯೇ ಜಗತ್ತಿನ ಎಲ್ಲ ಸಾರಗಳು ಕೂಡ ಮಾತನಾಡುತ್ತವೆ.

**ಹಾಲಲ್ಲ ಜೇನಲ್ಲ**
**ಹೊಂದಾಣಿಕೆಯಷ್ಟೇ**
**ನಿತ್ಯ ದಾಂಪತ್ಯ**

ಸಂಸಾರವು ಹಾಲು ಜೇನಿನಂತೆ ಬೆರೆಯಬೇಕು ಎಂಬ ನುಡಿಯಿದೆ. ಆದರೆ, ಹೇಳುವಷ್ಟು ಮಧುರ ಸವಿ ಸ್ವಪ್ನವಲ್ಲ ಈ ನಿತ್ಯ ದಾಂಪತ್ಯ. ಕಲ್ಪಿಸಿದಂತೆ, ಆಕಾಂಕ್ಷೆಯೊಂದಿದಂತೆ ಬದುಕು ಗೋಚರಿಸುವುದಿಲ್ಲ. ಅದು ನಿತ್ಯನೂತವಾಗಿ ಪ್ರತಿ ವಿಚಾರದಲ್ಲಿ ಸ್ವಾರ್ಥಗಳನ್ನು ಕಳಚಿ ಸಹಜವಾದ ಆಕಾಂಕ್ಷೆಗಳನ್ನು ತೊಡುತ್ತಾ ಪರಸ್ಪರ ಹೊಂದಾಣಿಕೆಯಾಗಿ ಸಾಗಬೇಕಿದೆ. ಸಾಹಿತ್ಯ ಓದಿದವರೆಲ್ಲಾ ಉತ್ತಮ ಬದುಕು ಅನುಭವಿಸಲು

ಸಾಧ್ಯವಿಲ್ಲ. ಸಾಹಿತ್ಯದ ಓದುವ ಜೊತೆಗೆ ಅನುಭವಿಸುವ, ಆಸ್ವಾದಿಸುವ ಅದನ್ನು ಲೋಕದ ಕಣ್ಣಿನಲ್ಲಿ ಕಾಣುವ ಶಕ್ತಿ ಇದ್ದವರು ಮಾತ್ರ ಹೊಂದಿಕೆಯೊಂದಿಗೆ ತಮ್ಮ ದಾಂಪತ್ಯದ ಸವಿಯನ್ನು ಸವಿಯಲು ಸಾಧ್ಯ.

**ಪ್ರೀತಿ ಎಂಬುದು**
**ಲೋಕ ಹೊಲೆಗೆಡಿಸಿ**
**ಕೊಂಡ ಒಂದು ಮಾತು**

ಪ್ರೀತಿಯು ಅಗತ್ಯಕ್ಕೆ ಬಳಸುವ ಒಂದು ಬಂಡವಾಳ ಪದವಾಗಿದೆ. ಅನುಕೂಲಕ್ಕೆ ಬಳಸಿ ಬಿಸಾಡುತ್ತಾ ಅದನ್ನು ಹೊಲಗೆಡಿಸಲಾಗಿದೆ. ಅದರಲ್ಲಿ ಅಡಗಿರುವ ಅನುಭವ ಜನ್ಯ ಧ್ಯಾನವನ್ನು ಸವಿಯಲು ಮುಕ್ಕಾಲು ಪಾಲು ಮನಸ್ಸುಗಳಿಗೆ ಸಾಧ್ಯವಿಲ್ಲ. ತಮ್ಮ ಅನುಕೂಲಗಳಿಗೆ ಪ್ರೀತಿಯೆಂಬ ಲೇಬಲ್ ಹಚ್ಚಿ, ಮನುಷ್ಯ ವ್ಯವಹಾರಗಳು ಈ ಪ್ರಕೃತಿಯಲ್ಲಿ ಜರುಗುತ್ತಿವೆ. ಇದೇ ಕವಿ ಹೇಳುವಂತೆ ಪ್ರೀತಿ ಇರುವಲ್ಲಿ ಒಂದಿಷ್ಟು ಸಮಯ ಇರುತ್ತದೆ. ತಾಳ್ಮೆ, ಕರುಣೆ ಹಾಗೂ ಕ್ಷಮೆಯು ಅಡಗಿರುತ್ತದೆ. ಅದ್ದರಿಂದಲೇ ಪ್ರೀತಿಯೆಂಬುದು ಅನುಭವಜನ್ಯ ಧ್ಯಾನ.

**ತೊರೆಯುವ**
**ತವಕ ತೊಡಕು**
**ಒಲಿದವರಿಗಿಲ್ಲ**

ಜಗತ್ತಿನ ಶ್ರೇಷ್ಠ ಶಕ್ತಿಯೆಂದರೆ ಪ್ರೀತಿ. ಪರಸ್ಪರ ಅರ್ಥಮಾಡಿಕೊಳ್ಳುವ ಮನಸ್ಸುಗಳು ಒಬ್ಬರಿಗೊಬ್ಬರು ಒಲುಮೆ ಹೊಂದಿರುತ್ತಾರೆ. ಈ ಪ್ರೀತಿಯು ಪ್ರೇಮಿಗಳು, ಗುರು–ಶಿಷ್ಯರು, ಸ್ನೇಹಿತರು, ಸಹೋದ್ಯೋಗಿಗಳು ಯಾರ ನಡುವೆಯಾದರೂ ಒಂದು ಬಾಂಧವ್ಯ ರೂಪಿಸಬಹುದು. ಆದರೆ, ಆ ಬಾಂಧವ್ಯದಲ್ಲಿ ತೊರೆಯುವ ತವಕ, ಸಮಸ್ಯೆ ಯಾವುದೂ ಇರುವುದಿಲ್ಲ. ಮೋಸ, ಸುಳ್ಳು, ಸ್ವಾರ್ಥ ಇವುಗಳ ಪ್ರವೇಶವು ಇವರ ನಡುವೆ ಇರಲು ಸಾಧ್ಯವಿಲ್ಲ. ಶುದ್ಧ ಮನಸ್ಸಿನ ನಿಸ್ವಾರ್ಥ ಬಂಧನದಲ್ಲಿ ಮಾತ್ರ ಇವೆಲ್ಲವೂ ಸಾಧ್ಯ.

ಅತಿಯಾದ ಬಂಧನವೂ ತೊಡಕುಗಳೇ ಆಗಿವೆ. ಪ್ರೀತಿಯ ಸ್ವಾರ್ಥವೂ ಒಲುಮೆಯಲ್ಲಿ ಇರಬಾರದು. ಇದೊಂದು ಪ್ರಕೃತಿಯ ಸ್ವರೂಪ. ಎಲ್ಲರಿಗೂ ಸಾಧ್ಯವಾಗುವ ಸಹಜ ಕ್ರಿಯೆ.

**ಕೆರೆಯೊಡಲ**

**ತುಂಬೆಲ್ಲ ಹಾವಸೆ**

**ಹಸೆಯ ನರ್ತನ**

ಕೆರೆಯು ಒಂದು ರೀತಿಯಲ್ಲಿ ನಮ್ಮ ಮನಸ್ಸಿನಂತೆ ಕಾಣುತ್ತದೆ. ತನ್ನೆಲ್ಲಾ ಕಶ್ಮಲಗಳನ್ನು ಹಿಂಗಿಸಿ, ಶುದ್ಧ ಸೌಂದರ್ಯ ಸೂಚಕವಾಗಿರುತ್ತದೆ. ಆದರೆ, ಅದೇ ಕೆರೆಯು ಒಮ್ಮೊಮ್ಮೆ ಹಾವಸೆ(ಪಾಚಿ)ಯಿಂದ ತುಂಬಿ ಹಸಿರು ಹಾಸಿನ ಉದ್ಯಾನವಾಗುತ್ತದೆ. ನೋಡಲು ಮಾತ್ರ ಹಚ್ಚ ಹಸಿರಿನ ಉದ್ಯಾನವಾಗಿರುವ ಈ ಕೆರೆಯ ಒಡಲು ಪರಿಶೀಲಿಸಿದಾಗ ಮಾತ್ರ ಪಾಚಿಯ ನೈಜತೆ ಕಾಣುವುದು. ಈ ಮನುಷ್ಯ ಜಗತ್ತಿನಲ್ಲಿಯೂ ಹೀಗೆಯೇ ಇರುತ್ತದೆ. ಬಾಹ್ಯ ಕಾಣಿಸುವ ಮನಸ್ಸಿನ ಒಡನಾಟವು ಹಲವು ಸಲ ಸತ್ಯವಾಗಿರುವುದಿಲ್ಲ. ಅದರ ಒಡನಾಟದಲ್ಲಿ ನೋವುಗಳೂ ಲಭಿಸುತ್ತವೆ.

**ಬದುಕಿರುವ**

**ತನಕ ಬಾಳು ನನ್ನದು**

**ಕೊರೆಯಲ್ಲ**

ಈ ಬದುಕನ್ನು ನನ್ನದೆಂದು ಪ್ರೀತಿಸಿದಾಗ ಮಾತ್ರ ಅದು ನನ್ನದಾಗುತ್ತದೆ. ಇಲ್ಲದಿದ್ದರೆ ಅದು ಬರಿ ಚಿಕ್ಕ ನೆಪವಾಗುತ್ತದೆ. ನಮ್ಮ ಸಮಾಜವನ್ನು ವಿಶಾಲವಾಗಿ ಆಲೋಚಿಸಿದರೆ ತಿಳಿಯುತ್ತದೆ ಇಲ್ಲಿ ಹಲವು ಸಂಸ್ಕೃತಿ, ಹಲವು ಏರು ಪೇರು ಮೊದಲಾದಂತೆ ಜನರು ಕಷ್ಟ–ಸುಖಗಳ ನಡುವೆ ಹೋರಾಡುತ್ತಲೇ ಬದುಕುತ್ತಿರುತ್ತಾರೆ. ಇರುವವನ ಚಿಂತೆ ಒಂದು ರೀತಿಯಲ್ಲಿದ್ದರೆ, ಇಲ್ಲದವನ ಚಿಂತೆಯು ಇನ್ನೊಂದು ತೆರನಾದದ್ದು. ಆದರೆ, ಇಬ್ಬರೂ ತನ್ನ ಸಾಧ್ಯತೆಗಳ ನಡುವೆ ಹೋರಾಡುತ್ತಲೇ ಸಾಗುತ್ತಾರೆ. ಇವರೆಲ್ಲಾ ಬದುಕಿರುವ ಬಾಳು ತನ್ನದೆಂದು ಪ್ರೀತಿಸುತ್ತಿದ್ದಾರೆ. ಪ್ರೀತಿಯಂತೆ ಫಲವು, ಫಲದಂತೆ ಅವರವರ ಬದುಕಿನ ಚೆಲುವು ಅಡಗಿರುತ್ತದೆ.

**ನೀಲ ನಭದ**

**ಎದೆ ತೆರೆದ ಕಣ್ಣು**

**ನಕ್ಷತ್ರಗಳು**

ಆಕಾಶವನ್ನು ಮನಸ್ಸಿಗೆ ಹೋಲಿಸಲಾಗುತ್ತದೆ. ಈ ಬ್ರಹ್ಮಾಂಡವು ಮಿತಿಗಳಿಲ್ಲದ ಎಲ್ಲೆಯಾಗಿದೆ. ಈ ಆಕಾಶದಲ್ಲಿ ತೇಲುವ ನಕ್ಷತ್ರಗಳು ಈ ವಿಶಾಲತೆಯ ಕಣ್ಣುಗಳಂತೆ ಹೊಳೆಯುತ್ತವೆ.

ಮನಸ್ಸಿಗೆ ಬೇಸರವಾದರೆ, ಆಕಾಶವನ್ನು ದಿಟ್ಟಿಸಿ ನೋಡುತ್ತೇವೆ. ಅದರ ವಿಶಾಲತೆ, ಮಿನುಗುವ

ತಾರೆಗಳ ವಿಸ್ಮಯವೆಲ್ಲವೂ ನಮ್ಮ ಚಿಕ್ಕ ಚಿಕ್ಕ ಆಕಾಂಕ್ಷೆ, ನೋವುಗಳನ್ನು ದಾಟಿ ನಾವೂ ಕೂಡ ವಿಶಾಲವಾಗಿ ತಿಳಿಯಲು, ಅರಿಯಲು ಕಾರಣವಾಗುತ್ತದೆ.

**ಗಿಡ ಮರವಾಗಲು**
**ನೆಲದ ಕಸುವು**
**ನೆರವಾಯ್ತು**

ಈ ನೆಲವು ತಾಯಿಯಂತೆ. ಅದರ ಸಮೃದ್ಧಿಯು ಅದೆಷ್ಟೋ ಸೃಷ್ಟಿಗಳಿಗೆ ಕಾರಣವಾಗಿದೆ. ಈ ಗಿಡ ಮರಗಳೆಲ್ಲವೂ ಈ ನೆಲದ ಸಮೃದ್ಧ ಚೈತನ್ಯದ ಕೊಡುಗೆ. ನೆಲವು ಹದವಾದಷ್ಟೂ ಪ್ರಕೃತಿಯಲ್ಲಿ ಜೀವ ಸೃಷ್ಟಿಗಳ ಬೆಳವಣಿಗೆಯಾಗುತ್ತದೆ. ಚಿಗುರು ಮೂಡುತ್ತದೆ. ಬೆಳೆದು ಮರವಾಗಿ ಮತ್ತೆ ಪ್ರಕೃತಿಯಲ್ಲಿ ಕರಗುವವರೆಗೂ ಈ ಪ್ರಕೃತಿಯದೇ ಜವಾಬ್ದಾರಿಯಾಗಿರುತ್ತದೆ.

**ಜಡ ಕಲ್ಲಿಗೆ**
**ಅರ್ಥವಾಗದು**
**ಮಣ್ಣ ಕನವರಿಕೆ**

ಇಲ್ಲಿ ಕಲ್ಲು ಮತ್ತು ಮಣ್ಣು ಎರಡು ರೂಪಕಗಳಾಗಿವೆ. ಕಲ್ಲು ಜಡತ್ವದ ಸಂಕೇತ. ಅದು ಬದಲಾಗುವುದಿಲ್ಲ, ಯಾವ ನೀರಿಕ್ಷೆಯೂ ಫಲಿಸಲಾರದು. ಆದರೆ, ಮಣ್ಣು ಅಂತಲ್ಲ. ಅದು ಸದಾ ಏನನ್ನಾದರೂ ಸೃಷ್ಟಿಸುತ್ತಲೇ ಇರುತ್ತದೆ. ಸಸ್ಯ ಸಂಪತ್ತು, ಪ್ರಾಣಿ ಸಂಪತ್ತು ಮೊದಲಾದಂತೆ ಅದರ ವಿಸ್ತೃತ ಜಗತ್ತು ವಿಶಾಲವಾದುದು.

ವಿಶೇಷವೆಂದರೆ, ನಮ್ಮ ವಿಜ್ಞಾನವು ತಿಳಿಸುವಂತೆ, ಕಲ್ಲುಗಳೇ ಪುಡಿಯಾಗಿ ಮಣ್ಣಾಗುತ್ತದೆ. ಮಣ್ಣೇ ಜ್ವಾಲಾಮುಖಿಯ ಸಂಘಟನೆಯಲ್ಲಿ ಕಲ್ಲಿನಂತೆ ರೂಪುತಾಳಿದೆ. ಈ ಎರಡೂ ಕ್ರಮದಲ್ಲಿಯೂ ಏಕರೂಪತೆ ಇದೆ. ಆದರೆ, ಅವುಗಳ ನೈಜತೆಯ ಕಾರ್ಯ ಮಾತ್ರ ವಿಭಿನ್ನವಾಗಿದೆ.

**ಪ್ರೀತಿಯ ನೀರಡಿಕೆ**
**ತೀರದು ನಲ್ಲೆ**
**ಮಯ್ಯೆಲ್ಲ ಬಾಯಿ**

ಪ್ರೀತಿಯು ಸದಾ ಹಸಿವಿನ ಕನವರಿಕೆ. ಅದು ಒಳಿತಿನ ಉಗ್ರಾಣ. ಅದರಲ್ಲೂ ನಲ್ಲ–ನಲ್ಲೆಯ

ಪ್ರೀತಿಯಂತೂ ಪಡೆದಷ್ಟೂ ತೀರದ ಅಕ್ಷಯಪಾತ್ರೆ. ವೃದ್ಧಾಪ್ಯಕ್ಕೂ ಸಾಗಿ.. ಜೊತೆಯಲ್ಲಿಯೇ ಸಾವನ್ನು ಅರಸುವ ನಂಟು. ಆದ್ದರಿಂದಲೇ ಈ ಪ್ರೀತಿಗೆ ಮೈಯೆಲ್ಲಾ ಬಾಯಿ ಎಂದು ಕರೆಯುತ್ತಾರೆ.

ಈ ಹಂಬಲವು ತೃಪ್ತವಾಗಬಾರದು. ನಮ್ಮ ಅದೆಷ್ಟೋ ಸಂಸಾರಗಳು ತೃಪ್ತಿಗೊಂಡು ತೇಗುವ ಕನವರಿಕೆಗಳು ಪ್ರೀತಿಯಾಗಿರದೇ ಕೇವಲ ಬಯಕೆಗಳಾಗಿ ಖಾಲಿಯಾಗಿರುತ್ತವೆ.

**ದುಡಿಯಲು ಕರ**
**ನಡೆಯಲು ಕೆರ**
**ಅದ್ಭುತ ಜೊತೆ**

ಈ ಹಾಯ್ಕುವಂತೂ ಜೋಡಿಪದಗಳಲ್ಲಿಯೇ ಬದುಕಿನ ಪೂರ್ಣಸಾರವನ್ನು ವಿವರಿಸಲಾಗಿದೆ. ದುಡಿಯುವ ಕೈಗಳು, ನಡೆಯುವ ಕಾಲುಗಳು ಈ ಎರಡೂ ಚೆನ್ನಾಗಿದ್ದರೆ, ಶುದ್ಧವಾಗಿದ್ದರೆ ಬದುಕು ಅರ್ಥಪೂರ್ಣವಾಗಿರುತ್ತದೆ. ಇವುಗಳಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಬದುಕಿನ ಬಂಡಿ ಸಾಗಲಾರದು. ಇವೆರಡು ಅದ್ಭುತ ಜೋಡಿಗಳಾಗಿವೆ. ಕಾಲಿಗೆ ಚಪ್ಪಲಿ ತುಂಬಾ ಸಹಾಯಮಾಡಬಲ್ಲದು. ಅದು ರಕ್ಷಣೆಯಷ್ಟೇ ಅಲ್ಲ, ಅದೇ ಕಾಲಿನ ಸೂಚಕವೂ ಕೂಡ ಆಗಿರುತ್ತದೆ.

**ಈ ಬುದ್ಧ ಸದಾ**
**ನಸುನಗುವುದು**
**ಏಕಿರಬಹುದು?**

ಬುದ್ಧನ ನಗುವಿನ ಸಂಶೋಧನೆಯು ಇಡೀ ವಿಶ್ವದಾದ್ಯಂತ ಸದಾ ನಡೆಯುತ್ತಲೇ ಇದೆ. ಆ ನಗು ಹಸನ್ಮುಖಿ ನಗು. ನೆಮ್ಮದಿಯ ನಗು, ತೃಪ್ತಿಯನ್ನು ಅರಸುವ ನಗು. ಒಟ್ಟಾರೆಯಾಗಿ ಜ್ಞಾನದ ನಗುವಾಗಿದೆ. ಈ ಜ್ಞಾನದ ಹುಡುಕಾಟವೇ ನಮ್ಮ ಅಧ್ಯಯನಗಳು. ಬುದ್ಧನು ಮೂಲತಃ ಭಾರತೀಯ ಪ್ರಜ್ಞೆಯ ಕಿರಣ. ಅವನ ಪ್ರತಿ ಸಂದೇಶದಲ್ಲಿಯೂ ಈ ಮಣ್ಣಿನ ಸಂಸ್ಕೃತಿ ಕಾಣಿಸುತ್ತದೆ. ಈ ಲೋಕಜ್ಞಾನವನ್ನು ನಾವು ಅರಿಯಬೇಕಿದೆ.

ಈ ನಸು ನಗುವನ್ನು ವಿಶ್ವಮಾನವ ಪ್ರಜ್ಞೆಯಲ್ಲಿ ಅರಿತಾಗ ಮಾತ್ರ ನಿಜವಾದ ಮನುಷ್ಯ ಧರ್ಮ ತಿಳಿಯುತ್ತದೆ. ಇಲ್ಲದಿದ್ದರೆ, ಬೌದ್ಧ ಧರ್ಮವೆಂಬ ಪ್ರತ್ಯೇಕ ನೆಲೆಯಾಗಿ ಉಳಿಯುತ್ತದೆ.

**ಸ್ವತ್ತು ಕೀರ್ತಿಗಾಗಿ**

**ಸಾಯುವವರ**

**ಯಮ ನೋಡಿ ನಕ್ಕ!**

ಯಮನ ನಗುವೇ ಎಲ್ಲಾ ಕಡೆ ಕೇಳಿಸಬಹುದು ಅನಿಸುತ್ತದೆ. ಈ ಶತಮಾನದ ಮನುಷ್ಯನಂತೂ ಸಂಪತ್ತು ಮತ್ತು ಕೀರ್ತಿಗಾಗಿಯೇ ಬದುಕುತ್ತಿದ್ದಾರೆ. ಆದರ್ಶವಾಗಿ ಕಾಣಿಸುವ ವ್ಯಕ್ತಿತ್ವಗಳಲ್ಲಿಯೂ ಇಂತಹ ಸಣ್ಣತನಗಳೇ ನಿಜರೂಪವಾಗಿರುವಾಗ ತ್ಯಾಗ, ಸರಳತೆಯಿಂದ ಬದುಕುವ ಸತ್ಯವಂತರು ಬಹಳ ಕಡಿಮೆ. ಅವರೂ ಕೂಡ ಇದ್ದಾರೆ. ಅವರು ಇರುವಂತೆಯೇ ಇರುತ್ತಾರೆ.

**ಕರುಣೆಯ ಕಣ್ಣಲಿ**

**ನೋಡಲು**

**ಜಗವೆಲ್ಲ ಬೆಳಕು**

ಬುದ್ಧನು ಜಗತ್ತನ್ನು ಕರುಣೆಯ ಕಣ್ಣಲ್ಲಿ ನೋಡಿದ ಕಾರಣ ಎಲ್ಲವೂ ಬೆಳಕಾಗಿ ಕಂಡಿತು. ಅದೇ ಮಾರ್ಗದ ಗಾಂಧಿ, ಅಂಬೇಡ್ಕರ್, ಕಲಾಂ ಇವರೆಲ್ಲಾ ಕಂಡದ್ದು ಸಾವಿರಾರು ಬೆಳಕಿನ ದರ್ಶನ. ಅಲ್ಲಿ ಕರುಣೆಯ ಹೊರೆತು ದ್ವೇಷವಿಲ್ಲ. ಅಲಿಪ್ತ ನೀತಿಯ ಮುಖ್ಯ ಗುರಿಯೇ ಪರಸ್ಪರ ಪ್ರೀತಿಸುವುದು. ನಾವು ಇನ್ನೊಬ್ಬರ ಕುರಿತು ಕರುಣೆಯ ಭಾವವನ್ನು ತೊಡುವಲ್ಲಿ ಎರಡು ಮುಖ್ಯ ಲಾಭಗಳಿವೆ. ಮೊದಲಿಗೆ ನಾವು ಆನಂದವಾಗಿರಬಹುದು. ಇನ್ನೊಬ್ಬರಿಗೂ ಆನಂದ ತುಂಬಬಹುದು. ಶತ್ರುವೂ ಕೂಡ ಕರುಣೆಯ ಮುಖಾಮುಖಿಗೆ ಸೋಲುತ್ತಾನೆ. ನಮ್ಮ ಭಾರತೀಯ ಸಂಸ್ಕೃತಿಯ ದೇವರು, ಋಷಿ–ಸಾಧು ಪರಂಪರೆಗಳೆಲ್ಲಾ ಈ ಕರುಣೆಯ ಕಣ್ಣಲ್ಲಿ ಅರಳಿದ ಮೌನಶಕ್ತಿಗಳು. ಈ ಸ್ವರೂಪದಲ್ಲಿ ಕಾಣಿಸುವ ಬೆಳಕೇ ನಮ್ಮ ಆತ್ಮದರ್ಶನ.

**ಅಗಣಿತ ಬೆರಗು**

**ಗಣಿಸದೆ**

**ಬದುಕುವ ಆಸೆ**

ಈ ಬದುಕು ಹಲವು ಬೆರಗುಗಳ ನಿತ್ಯ ಕೂಟ. ಈ ಬೆರಗುಗಳ ಲೆಕ್ಕಚಾರದಲ್ಲಿಯೇ ಸಾಕಷ್ಟು ಜನರು ತಮ್ಮ ಬಾಳ್ವೆಯನ್ನು ಸವೆಸುತ್ತಾರೆ. ಆದರೆ, ಈ ಬೆರಗು ಈಗಾಗಲೇ ಪ್ರಕೃತಿಯಲ್ಲಿ ಸಹಜವಾದುದು. ಈ ಪ್ರಕೃತಿಯ ನಿಯಮಗಳನ್ನೇ ಅರಿಯದ ನಾವು ಮೂರ್ಖರಾಗಿ ಅಪರೂಪಕ್ಕೆ ಕಾಣಿಸುವ ಬೆರಗುಗಳಿಗೆ ಕುತೂಹಲಿಗಳಾಗಿ ಕೂರುತ್ತೇವೆ. ಯೋಗಶಾಸ್ತ್ರವು ಹೇಳುತ್ತದೆ "ಧ್ಯಾನದಲ್ಲಿಯೇ ಪ್ರಕೃತಿಯ ಸಕಲ ಬೆರಗುಗಳ ದರ್ಶನವಿದೆ"ಯೆಂದು, ಅದನ್ನು ಅರಿಯಬೇಕಾದ ಮೌನ ನಮ್ಮೊಳಗೆ ಮೂಡಬೇಕಾಗಿದೆ.

**ದಡದಲ್ಲೇ**
**ತಣಿವ ಪಾದಕೆ**
**ನಿಲುಕದು ಕವಿತೆ !**

ಕವಿತೆಯೆಂಬುದು ಅಂತರಾಳದ ಆತ್ಮಾನುಸಂಧಾನ. ಅದನ್ನು ಕಾಣಿಸಲು ನಮ್ಮ ಒಳಗಣ್ಣೇ ತೆರೆಯಬೇಕಾಗುತ್ತದೆ. ಎಲ್ಲ ಪದಗಳೂ ಕವಿತೆಯಲ್ಲ, ಕವಿತೆಯಾಗುವ ಪದಕ್ಕೆ ಯಾವುದೇ ಬೇಲಿಯಿಲ್ಲ. ನಾವು ಉದ್ದೇಶಿತ ಕವಿಗಳಾಗಿ ಪದಗಳನ್ನು ಪೋಣಿಸುತ್ತಾ ಕುಳಿತರೆ ನದಿಯ ದಡದಲ್ಲಿಯೇ ನಿಂತು ನದಿಯನ್ನು ಅರಿತಂತೆ ಮಾತನಾಡುವ ವಿದೂಷಕನಾಗುತ್ತೇವೆ. ಅನುಭವದ ಆಳಕ್ಕೆ ಇಳಿದು ಅಂತರಾತ್ಮವನ್ನು ಅರಿಯಬೇಕು. ಜಿ.ಎಸ್.ಎಸ್ ಅವರು ಕವಿತೆ ಕಟ್ಟುವ ಕ್ರಿಯೆಯನ್ನು ಅಡುಗೆ ಕಾರ್ಯಕ್ಕೆ ಹೋಲಿಸಿದ್ದಾರೆ. ಕವಿತೆಯು ಹದವಾದ ಪಾಕ ಪ್ರಕ್ರಿಯೆ. ಅಂತೆಯೇ ದರ್ಶನವಾಗುತ್ತದೆ.

**ಹತ್ತಿಕ್ಕಲಾಗದು**
**ಹುಟ್ಟು ಹಾಕುವ**
**ತವಕವ ನೀನು**

ಸದಾ ಚಲಿಸುವ ಭಾವವನ್ನು ಬಂಧಿಸಲಾಗದು, ಹತೋಟಿಯಲ್ಲಿಡಲಾಗದು. ಈ ಭಾವಗಳೇ ಹೀಗೆ, ಸದಾ ಲಹರಿಯಂತೆ ಉನ್ಮಾದಗೊಳ್ಳುತ್ತವೆ. ಚಿಟ್ಟೆಯಂತೆ ಹಾರುತ್ತವೆ. ಆದರೆ, ಚಲಿಸುವ ದಾರಿಯು ಮುಖ್ಯವಾಗುತ್ತದೆ. ಇಂತಹ ಭಾವಗಳನ್ನು ನಮ್ಮ ಲೋಕದ ಹಲವು ಬಂಧನಗಳು ಸದಾ ಹತೋಟಿಯಲ್ಲಿಟ್ಟು ಕುಬ್ಜರನ್ನಾಗಿಸುತ್ತವೆ.

ಈ ಜಾತಿ, ಧರ್ಮ, ಬಣ್ಣ, ಲಿಂಗ, ಪ್ರದೇಶ ಹೀಗೆ ಹತ್ತಾರು ಬಂಧನಗಳು ಮನುಷ್ಯನನ್ನು, ಅವನ ಭಾವಗಳನ್ನು ಬಂಧಿಸುತ್ತಾ ನಮ್ಮನ್ನು ನಾಶಗೊಳಿಸಿಕೊಳ್ಳಲು ಸಿದ್ಧರಾಗುತ್ತೇವೆ. ಆದರೆ, ಜ್ಞಾನದ ಸೋಂಕಿತನಾದ ಪ್ರತಿ ಜೀವಕ್ಕೂ ಸದಾ ಹುಟ್ಟು ಹಾಕುವ ಅಂದರೆ ಚಲಿಸುವ ತವಕವಿರುತ್ತದೆ. ಈ ಭಾವವನ್ನು ಯಾವ ಬಂಧನಗಳು ಬಂಧಿಸಲಾಗದು. ಅದೊಂದು ಅಮೃತ ಪಯಣ. ಅನಂತ ಧ್ಯಾನದ ಬದುಕು.

**ಪದಗಳ**
**ತನ್ಮಯತೆಯೊಳಗೆ**
**ಕವಿತೆಯೇ ಮಾಯ!**

ಎಷ್ಟೋ ಸಂದರ್ಭದಲ್ಲಿ ಪದಗಳ ಮೋಡಿಗೆ ಸಿಲುಕಿ ಕವಿತೆಯ ನಿಜವಾದ ಕ್ರಮವನ್ನೇ ಮರೆಯುತ್ತೇವೆ.

ನಮ್ಮ ಸಿನೆಮಾ ಹಾಡುಗಳು ಇಂತಹ ಪ್ರಕ್ರಿಯೆಗೆ ಸೂಕ್ತ ಉದಾಹರಣೆ ಎನ್ನಬಹುದು. ಅವು ಹಾಡುಗಳೆಮದು ಸಂಗೀತದಲ್ಲಿ ಕುಣಿಸಿರುತ್ತೇವೆ. ಆದರೆ, ಅದೊಂದು ಭಾವ ಅರ್ಥಗಳ ದಾಟಿ ಸಮಾಜಕ್ಕೆ ಹೀನಾರ್ಥಗಳನ್ನೇ ನೀಡುತ್ತಿರುತ್ತವೆ. ಕವಿತೆಯ ಗಂಧಗಾಳಿಗೂ ಸೋಕದೆ ಗದ್ಯವೂ ಆಗದೆ, ಲಹರಿಯಲ್ಲಿ ಜೋತು ಬಿದ್ದ ಪದಗಳಾಗಿ ಸಂಗೀತದಲ್ಲಿ ಮಿಂದು ಕಿವಿಗಳಲ್ಲಿ ಕುಣಿಯುತ್ತವೆ.

ಕವಿತೆಯಾಗುವುದೆಂದರೆ ಪದಗಳೇ ಜನ್ಮಾಂತರದ ಸಂಬಂಧದಂತೆ ಕೂಡಬೇಕು. ಧ್ಯಾನ ಲಹರಿಯಂತೆ ಧ್ವನಿಯಲ್ಲಿ ಬೆರೆತು ಹಾಡಬೇಕು. ಬರೆದ ಕವಿಗೂ, ಕೇಳಿದ ಕಿವಿಗೂ ಅನಂತ ಚಲನೆ ಮೂಡಿಸಬೇಕು.

**ಆತ್ಮವಿಲ್ಲದವರ**
**ಬಾಯ ವಾಸನೆ**
**ಹೊರ ನೂಕಿತು**

ಆತ್ಮವಿದ್ದಲ್ಲಿ ಅನುಸಂಧಾನವಿರುತ್ತದೆ. ಅದು ಜ್ಞಾನದ ನುಡಿಯಾಗಿರುತ್ತದೆ. ವಚನದಲ್ಲಿ ಬಸವಣ್ಣನವರು ಈ ಕಾರಣದಿಂದಲೇ ನುಡಿಯ ಬೆರಗನ್ನು ಮುತ್ತಿನ ಹಾರ, ಮಾಣಿಕ್ಯದ ದೀಪ್ತಿ ಎಂದು ಗೌರವಿಸಿದ್ದು ಎನಿಸುತ್ತದೆ. ಆದರೆ ಆತ್ಮವಿಲ್ಲದ ನುಡಿಗಳು ಯಾವುದೇ ಪ್ರೀತಿಯನ್ನು ಗಳಿಸಲಾರವು. ಕೆಟ್ಟವಾಸನೆಯ ನುಡಿಯು ಕೇಳಲಿಷ್ಟವಿರದಂತೆ ಸಂಬಂಧಗಳನ್ನು ಕಳಚುತ್ತದೆ.

**ದೇವರ ನಿಘಂಟಿಗೆ**
**ಅರ್ಥ ವ್ಯರ್ಥಗಳ**
**ತೊಡಕಿಲ್ಲ**

ದೇವರೆಂದರೆ ಯಾರು ಎಂಬುದಕ್ಕೆ ಈ ಹಿಂದೆ ಚರ್ಚಿಸಲಾಗಿದೆ. ಈ ಮನದ ಬಂಧುವಿಗೆ ಈ ಸಮಾಜದ ಯಾವ ಒಳಿತು–ಕೆಡುಕುಗಳ ಲೆಕ್ಕಾಚಾರವಿರುವುದಿಲ್ಲ. ಕೆಡುಕಾದರೆ ಕೆಟ್ಟ ಪರಿಣಾಮ ಬೀರುತ್ತದೆ. ಒಳಿತಾದರೆ ಒಳ್ಳೆಯ ಕಾರ್ಯಗಳು ಘಟಿಸುತ್ತವೆ. ಇಂತಹ ಕಾರ್ಯಗಳನ್ನು ನಾವು ಸದಾ ದೇವರ ಹೆಸರಿನಲ್ಲಿಟ್ಟು ಆಲೋಚಿಸುತ್ತೇವೆ. ಆ ದೇವರು 'ಮನಸ್ಸಿನಲ್ಲಿಯೇ ಇರುವ ಜ್ಞಾನವು' ನಮಗೆ ತಿಳಿಯಬೇಕಿದೆ.

**ನೆಲಕ್ಕೆ ಬಿದ್ದ**
**ಹೂ ಪಕಳೆ**
**ಮರ ಬರೆದ ರಂಗೋಲಿ**

ಈ ಹಾಯ್ಕುವಿನ ಸಾಲು ಸಂಕಲನಕ್ಕೆ ಶೀರ್ಷಿಕೆಯಾಗಿದೆ. ಇದು ಶೃಂಗಾರವನ್ನು ಕುರಿತು ಹೇಳುವಂತಿದೆ. ಸಹಜವಾಗಿ ಮರದಲ್ಲಿ ಅರಳಿದ ಹೂವುಗಳು ಮುಂದಿನ ಸೃಷ್ಟಿ ಕ್ರಿಯೆ ಕಾರಣದಿಂದ ತನ್ನ ದಳಗಳನ್ನು ನೆಲಕ್ಕೆ ಚೆಲ್ಲುತ್ತವೆ. ಈ ರೀತಿಯಲ್ಲಿ ಬೀಳುವ ಹೂವುಗಳು ನೆಲದಲ್ಲಿ ಸಹಜ ರಂಗೋಲಿಯಂತೆ ಶೃಂಗರಿಸುತ್ತವೆ. ಪಾರಿಜಾತ ಹೂ ರಾತ್ರಿಯರಳಿ, ರಾತ್ರಿಯೇ ತೊಟ್ಟು ಕಳಚಿ, ಮುಂಜಾನೆಯ ವೇಳೆಗೆ ಶೃಂಗಾರದ ಸಂಯೋಗವನ್ನು ಸೃಷ್ಟಿಸಿರುತ್ತದೆ. ಇದೇ ರೀತಿಯಲ್ಲಿ ಸಾವಿರಾರು ಮರಗಳು ಮೂಡಿಸುವ ನಿಸರ್ಗ ಸೌಂದರ್ಯವನ್ನು ಕಾಣಬಹುದು.

**ದೇವರ ಪ್ರಸಾದಕ್ಕೆ**
**ಹಸಿದೊಡಲ**
**ಬೇಗೆ ತಟ್ಟದು**

೧೨ನೇ ಶತಮಾನದ ವಚನಕಾರರು ಪ್ರಸಾದವನ್ನು ಹಸಿದ ಒಡಲಿನ ಅಮೃತವಾಗಿ ಪರಿಗಣಿಸಿದ್ದರು. ಲಿಂಗಕ್ಕೆ ಬೋನ(ಪ್ರಸಾದ)ವನ್ನು ಹಿಡಿಯುವ ಕಾರ್ಯಗಳನ್ನು ನಿರಾಕರಿಸಿದ್ದರು. ಆದರೆ, ಇಂದು ಯಾವುದೇ ದೇವರ ಪ್ರಸಾದವೂ ಹಸಿದೊಡಲ ನೋವನ್ನು ಕಾಣುತ್ತಿಲ್ಲ.

ಕಾಯಕ ಮತ್ತು ಕೆಲಸ ವಿಭಿನ್ನವಾದ ಕ್ರಿಯೆಗಳು. ಕಾಯಕವು ಪ್ರಸಾದ ಚಿಂತನೆಯ ಕಾರ್ಯವಾದರೆ, ಕೆಲಸವು ಹಣದ ಚಿಂತನೆಯಾಗಿರುತ್ತದೆ. ದೇವರ ಎದುರು ನಾವು ವಿವಿಧ ಹೆಸರಿನ ಕೆಲಸಗಳನ್ನು ಮಾಡುತ್ತಿದ್ದೇವೆಯೇ ಹೊರೆತು, ನಾವು ಮಾಡುವ ಪ್ರತಿ ಕಾರ್ಯದಲ್ಲೂ ಕಾಯಕ ಪ್ರಜ್ಞೆಯನ್ನು ಮನದುಂಬಿಕೊಂಡು ದೇವರನ್ನು ಕಾಣುವ ಪ್ರಯತ್ನ ಮಾಡುತ್ತಿಲ್ಲ. ನಮ್ಮ ನಡುವೆಯೇ ಕಾಯಕ ಪ್ರಜ್ಞೆಯ ಕೆಲವರು ಎಲೆಮರೆಯ ಕಾಯಿಯಂತೆ ಇದ್ದಾರೆ. ಅವರನ್ನು ಅನುಸರಿಸುವ ಮೂಲಕ ಪ್ರಸಾದಕ್ಕೆ ಹಸಿವಿನ ನೋವು ತಲುಪುವಂತೆ ಮಾಡಬೇಕಾಗಿದೆ.

**ಅಧಿಕಾರಕ್ಕೆ**
**ಮೆದುಳಿರುತ್ತದೆ**
**ಹೃದಯವಿರದು**

ಚಾಣಕ್ಯ, ಅರಿಸ್ಟಾಟಲ್ ಮೊದಲಾದವರು ಬಹು ಹಿಂದೆಯೇ ಅಧಿಕಾರದ ಮೆದುಳನ್ನು ಕುರಿತು ಸಾಕಷ್ಟು ಹೇಳಿದ್ದಾರೆ. ಹೃದಯವಿರದ ಎಚ್ಚರವನ್ನೂ ಸೂಚಿಸಿದ್ದಾರೆ. ಅಧಿಕಾರದ ಹಂಬಲಕ್ಕಾಗಿ ಸೃಷ್ಟಿಸುವ ತಂತ್ರಗಾರಿಕೆಯಿಂದ ರಾಜ್ಯದ ಪಲ್ಲಟಗಳು, ವಿನಾಶಗಳ ಕಥೆಗಳಂತೂ ಇಂದಿಗೂ ನಿತ್ಯ ಕಾಣುತ್ತೇವೆ. ಮಾನವೀಯತೆ, ಅಂತಃಕರಣವಿಲ್ಲದ ಯಾವುದೇ ಮೆದುಳಿನ ಆಲೋಚನೆಯು ಒಂದು ರೀತಿಯಲ್ಲಿ ಯಂತ್ರದಂತೆ.

ಒಂದು ರಾಜ್ಯವೆಂದರೆ ಜನರ ಉಸಿರಾಟದ ಗೂಡು. ಅಲ್ಲಿ ಮೆದುಳಿಗಿಂತ ಹೃದಯ ಮಾತನಾಡಬೇಕು. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಮೊದಲಾದವರು ತಮ್ಮ ಹೃದಯದ ಮಾತುಗಳಿಂದ ಅಧಿಕಾರದ ಹಂಗು ತೊರೆದರು. ಇಂದಿಗೂ ರಾಜರಂತೆ ರಾರಾಜಿಸುತ್ತಿದ್ದಾರೆ.

ಶ್ರೀಸಾಮಾನ್ಯನು ಮೆದುಳಿರುವ ರಾಜನಿಗಿಂತ, ಹೃದಯವಿರುವ ಸೇವಕನನ್ನೇ ಸದಾ ಇಷ್ಟಪಡುವುದು. ಈ ವಿಚಾರಗಳು ನಮ್ಮ ರಾಜ್ಯ, ದೇಶದ ಆಡಳಿತ ವ್ಯವಸ್ಥೆಗೆ ತಿಳಿಯಬೇಕಿದೆ.

ಈ ಹಾಯ್ಕುಗಳು ನಮ್ಮನ್ನು ಹಲವು ವಿಚಾರಗಳ ಮೂಲಕ ಹೊಸ ಚಿಂತನೆ, ಬದುಕು ಹಾಗೂ ನೆಮ್ಮದಿಗಾಗಿ ತಯಾರು ಮಾಡುತ್ತವೆ. ಸ್ವೀಕಾರ ಸಹೃದಯತೆ ನಮಗಿರಬೇಕು.

***

## ಡಾ. ರವಿಶಂಕರ್ ಎ.ಕೆ ಅವರ ಸಾಹಿತ್ಯ ಕಾಯಕ

1. ಜೀವನ ಚರಿತ್ರೆ – **ಖಾನ್ ಅಬ್ದುಲ್ ಗಫಾರ್ ಖಾನ್** 2015
2. ಕವನ ಸಂಕಲನ – **ಎತ್ತಿಕೊಂಡವರ ಕೂಸು** 2017
3. ಸಂಪಾದನೆ – **ಬೇರು ತೇರು** (ಬೇಂದ್ರೆ ಕುವೆಂಪು ಗದ್ಯ ಸಾಹಿತ್ಯ ಕುರಿತ ಸಂಶೋಧನಾ ಲೇಖನಗಳು) 2019
4. ಸಂಪಾದನೆ – **ಕನ್ನಡ ಸಾಹಿತ್ಯ : ನಾಟಕ, ರಂಗಭೂಮಿ ಮತ್ತು ಸಿನಿಮಾ** 2019
5. ಸಂಪಾದನೆ – **ಮುದ್ದಣ ಎಂಬ ಸಾಹಿತ್ಯ ಸೌರಭ** 2021
6. ಸಂಪಾದನೆ – **ಇಂಗ್ಲಿಷ್ ಗೀತಗಳು ಎಂಬ ಶ್ರೀ ಸಾಹಿತ್ಯ** 2021
7. ಸಂಪಾದನೆ – **ಅಡಿಗರು ಎಂಬ ಸಾಕ್ಷಿ ಪ್ರಜ್ಞೆ** 2022
8. ಸಂಪಾದನೆ – **ಸಮತೆಯ ಕಡಲು ಮಮತೆಯ ಒಡಲು** 2022
9. ಕವನ ಸಂಕಲನ – **ಸಖಿ ಶಾರದೆ** 2022
10. ಕವನ ಸಂಕಲನ – **ನಲ್ಲ ನಲ್ಲೆಯ ವಸಂತ** 2022
11. ಸಂಶೋಧನಾ ಕೃತಿ – **ಸವೆಯದೀ ಸವಿ** – 2022
12. ಸಂಶೋಧನಾ ಕೃತಿ – **ಸೌಂದರ್ಯ ಶುಚಿ** – 2022
13. ಸಂಶೋಧನಾ ಕೃತಿ – **ಸಹೃದಯ ಓದು** – 2022
14. ಸಂಪಾದನೆ – **ಕನ್ನಡ ನೋಟ ಶಾಂತಿಯ ತೋಟ** –2023
15. ಸಂಪಾದನೆ – **ಅರಿವಿನೊಳಗಣ ಬೆರಗು** – 2023
16. ಸಂಪಾದನೆ – **ಕನ್ನಡ ಅಸ್ಮಿತೆ ಶಾಂತಿ ಮತ್ತು ಸಾಮರಸ್ಯ** – 2023
17. ಸಂಪಾದನೆ – **ವಚನ ಚಿಂತನ ವಿಶ್ವ ದರ್ಶನ** ಸಂಪುಟ – 1, – 2
18. ಕವನ ಸಂಕಲನ – **ಸುಂದರ ಕಿಚ್ಚು** (2023)
19. ಹಾಯ್ಕುಗಳು – **ಈ ಕಾಲದ ಒಲವು** (ನೂರು ಹಾಯ್ಕುಗಳು) (2024)
20. **ಜಾನಪದ ವಿಶ್ವಪಥ** ಸಂಪುಟ – 1, – 2
21. ಕವಿತೆ – ನಾಟಕ – ರಂಗರೂಪಕ – **ನಿರಾಮಯ** 2025
21. ವಿಮರ್ಶೆ – **ರಸ ಚಿಂತನೆ** (ಮರ ಬರೆದ ರಂಗೋಲಿ – ಹಾಯ್ಕುಗಳ ವಿಮರ್ಶೆ) – 2025
22. **ಮೆಟ್ರೋ ಕಥನ (ಸಾವಿರ ಕಥೆಗಳ ಜೊತೆಗೆ ಹಾಯ್ಕುಗಳ ವಿಶೇಷ ಸಂಗಮ) – ಪ್ರಕಟಣೆಗೆ ಸಿದ್ಧವಾಗುತ್ತಿದೆ**

https://sites.google.com/view/jeevanapreethi/jeevana-prithi

**ಜೀವನ ಪ್ರೀತಿ ಜಾಲತಾಣದ ಮೂಲಕ ಸಾಹಿತ್ಯದ ನಿರಂತರ ಕಾರ್ಯಗಳನ್ನು ಅವಲೋಕಿಸಬಹುದು.**



ಮರ ಬರೆದ ರಂಗೋಲಿ




"ಹದಿನೇಳು ಅಕ್ಷರಗಳಲ್ಲಿ ಇಪ್ಪತ್ತೆಂಟು ವಿಚಾರಗಳನ್ನಾಡುವುದು ಹೈಕು" ಎಂಬ ರಚನೆಯೊಂದು ಈ ಸಂಕಲನದಲ್ಲಿರುವುದು ಆಕಸ್ಮಿಕವೇನಲ್ಲ. ಲೋಕ ವ್ಯಾಪಾರವನ್ನು ಎಚ್ಚರದ ಸೂಕ್ಷ್ಮ ಕಣ್ಣಿಂದ ದರ್ಶಿಸುತ್ತಾ ಅದರೊಳಗಣ ಒಳ ಸುಳಿಗಳನ್ನು ಹದಿನೇಳು ಅಕ್ಷರಗಳಲ್ಲಿ ಹಿಡಿಯುವ ಈ ಆಟ ಓದುಗರ ಭಾವ ಲೋಕವನ್ನು ವಿಸ್ತರಿಸಬಲ್ಲವು. ಅವ್ಯಕ್ತವಾದ, ಅಮೂರ್ತವಾದ ಕಾಣ್ಕೆಗೆ ಉತ್ತಮ ಮಾದರಿಯಾದ 'ಹಾಯ್ಕುಗಳು' ಡಾ. ಎಚ್. ಎಸ್. ಸತ್ಯನಾರಾಯಣ ಅವರನ್ನು ಗದ್ಯದಿಂದ ಪದ್ಯಗಳೆಡೆಗೆ ಹೊರಳಿಸುವಲ್ಲಿ ಯಶಸ್ವಿಯಾಗಿವೆ. ವಿಮರ್ಶೆ, ಪ್ರಬಂಧಗಳಲ್ಲಿ ಮುಳುಗಿದ್ದ ಬರಹಗಾರನೊಬ್ಬನ ಕಾವ್ಯಕಸುವನ್ನು ಎಲ್ಲ ಸೃಜನಶೀಲ ಆಯಾಮದೊಂದಿಗೆ ಕಾಣಿಸಬಲ್ಲ ಇಲ್ಲಿನ ರಚನೆಗಳಲ್ಲಿ ಕಾಣುವ ದೃಷ್ಟಿಕೋನವು ಓದುಗರೆದೆಯಲ್ಲಿ ಸಕಾರಾತ್ಮಕ ನಿಲುವನ್ನು ಗಟ್ಟಿಗೊಳಿಸಬಲ್ಲವು. ರೆಕ್ಕೆ ಬಲಿತ ಪುಟ್ಟ ಪುಟ್ಟ ಹಕ್ಕಿಗಳು ಅನಂತಕ್ಕೆ, ಕ್ಷಿತಿಜದೆಡೆಗೆ ಹಾರಲು ಹಾತೊರೆಯುವಂತೆ ಇಲ್ಲಿನ ಪುಟ್ಟ ಪುಟ್ಟ ಕವಿತೆಗಳು ನಮ್ಮ ಚಿಂತನೆಗೆ ರೆಕ್ಕೆ ಮೂಡಿಸುತ್ತವೆ. ನಮಗೆ ಬೇಕಾದಂತೆ ಅರ್ಥೈಸಿಕೊಂಡು ಸುಖಿಸಬಹುದಾದ ಸಫಲ ರಚನೆಗಳಿವು.

ಎಂ. ಆರ್. ಕಮಲ
ಹಿರಿಯ ಕವಯಿತ್ರಿ

ಅಲಂಪು ಪ್ರಕಾಶನ
ಮಾಲೂರು, ಕೋಲಾರ ಜಿಲ್ಲೆ

ಕವಿತೆಯ ಸಾಲುಗಳು ಬರೆದ ಕವಿಗಿಂತ, ಸಹೃದಯತೆಯಿಂದ ಸ್ಪಂದಿಸುವ ಓದುಗನಿಗೆ ಸಂವೇದ್ಯವಾಗುವ ಪರಿ ನಿಜಕ್ಕೂ ಅಚ್ಚರಿಯನ್ನು ತರುತ್ತದೆ. ಇದಕ್ಕೆ ಡಾ. ರವಿಶಂಕರ್ ಅವರ ಈ ರಸಚಿಂತನೆಯು ಉತ್ತಮ ಉದಾಹರಣೆಯಾಗಿದೆ. ನಾನು ತುಂಬ ಸಂಕೋಚದಿಂದಲೇ ಹೊರತಂದಿದ್ದ 'ಮರ ಬರೆದ ರಂಗೋಲಿ' ಎಂಬ ಪುಟ್ಟ ಹಾಯ್ಕುಗಳ ಸಂಕಲನಕ್ಕೆ ರವಿಶಂಕರ್ ಅವರು ನೀಡಿರುವ ವ್ಯಾಪಕಾರ್ಥದ ಹೊಳಹುಗಳು ನನಗೆ ಸಂತಸವನ್ನುಂಟು ಮಾಡಿವೆ. ರವಿಯವರ ಓದು ಮತ್ತು ಗ್ರಹಿಕೆಗಳು ಈ ರಸಚಿಂತನೆಯುದ್ದಕ್ಕೂ ಸ್ಪಷ್ಟ ಮತ್ತು ನಿಖರವಾಗಿ ಕಾಣುತ್ತವೆ. ಅವರ ಹೃದಯವಂತಿಕೆಯಿಂದ ಮೂಡಿದ ಈ ರಸಚಿಂತನೆಯು ಓದುಗರಿಗೆ ಕೈದೀವಿಗೆಯಾಗಬಲ್ಲದು. ಅತ್ಯಂತ ಪ್ರೀತಿಯಿಂದ ರವಿಯವರನ್ನು ಅಭಿನಂದಿಸುತ್ತೇನೆ.

-ಡಾ.ಎಚ್.ಎಸ್. ಸತ್ಯನಾರಾಯಣ




